ಸೊಲ್ಲಾಪುರದ

# ಶ್ರೀ ಸಿದ್ಧರಾಮೇಶ್ವರ ಚರಿತ್ರೆ

( ವಚನಗಳು ಸಹಿತವಾಗಿ )



ಶ್ರೀ ಜಗದಂಬಾ ಪ್ರಕಾಶನ, ಹುಬ್ಬಳ್ಳಿ

# ಶ್ರೀ ಸಿದ್ಧರಾಮೇಶ್ವರ

## ಚರಿತ್ರೆ



ಲೇಖಕರು:

" ಎಂ. ಜೀವನ "

ಜನೇವರಿ ೧೯೫೯

ಬೆಲೆ: ೦-೬-೦ )　　( ೩೭ ನ. ಪೈ.

# ಶ್ರೀ ಸಿದ್ಧರಾಮೇಶ್ವರ

 ಚರಿತ್ರೆ 



ಲೇಖಕರು:
" ಎಂ. ಜೀವನ "

ಜನೇವರಿ ೧೯೫೫

ಬೆಲೆ: ೦-೬-೦ ) ( ೩೭ ನ. ಪೈ.




ಮುದ್ರಕರು:—

**ಆರ್. ಜೆ. ಬಾಕಳೆ**

ಶ್ರೀ ರೇಣುಕಾ ಪ್ರಿಂಟಿಂಗ ಪ್ರೆಸ್, ಡಾ. ಮುಕರ್ಜಿ ರೋಡ. ಹುಬ್ಬಳ್ಳಿ.



ಮುಖಚಿತ್ರದ ರಚನೆ:—

**ಶ್ರೀ ಜಗದಂಬಾ ಪ್ರಕಾಶನದ ಕಲಾವಿದರಿಂದ**



ಮೊದಲ ಮುದ್ರಣ

**ಜನೇವರಿ ೧೯೫೯**









ಪ್ರಕಾಶಕರು:—

**ಜೆ. ಟಿ. ಬಾಕಳೆ**

ಶ್ರೀ ಜಗದಂಬಾ ಪ್ರಕಾಶನ, ೧೪೪೭೩. ಗಂಜೀ ಪೇಠ, ಹುಬ್ಬಳ್ಳಿ.




## ಸೊಲ್ಲಾಪುರದ

# ಶ್ರೀ ಸಿದ್ಧರಾಮೇಶ್ವರ ಚರಿತ್ರೆ

**' ಹೆತ್ತ ತಾಯಿ ಮಾತ್ರ ದೇವತಾ ಸಮಾನ '**

( ಮಾತೃ ದೇವೋ ಭವವೆಂದು ವೇದ ಕಾಲದಿಂದ ಜಾಣಾ ಹಂಗುರ ವಾಗಿ ಸಾರುತ್ತ ಬಂದ ಪರಂಪರೆಯನ್ನು ನಿಷೇಧಿಸಿ )

" ತಾ ಮಾಡಿದ ಹೆಂಣು ತನ್ನ ತಲೆಯ ನೇರಿತ್ತು.
ತಾ ಮಾಡಿದ ಹೆಂಣು ತೊಡೆಯ ನೇರಿತ್ತು.
ತಾ ಮಾಡಿದ ಹೆಂಣು ಬ್ರಹ್ಮನ ನಾಲಗೆಯ ನೇರಿತ್ತು.
ತಾ ಮಾಡಿದ ಹೆಂಣು ನಾರಾಯಣನ ಎದೆಯನೇರಿತ್ತು.
ಅದು ಕಾರಣ ಹೆಂಣು ಹೆಂಣಲ್ಲ, ರಾಕ್ಷಸಿಯಲ್ಲ,
ಹೆಂಣು ಪ್ರತ್ಯಕ್ಷ ಕಪಿಲ ಸಿದ್ಧ ಮಲ್ಲಿಕಾರ್ಜುನ ನೋಡಾ !"

—ಎಂದು ಇಡಿಯ ಮಹಿಳಾ ಸಮಾಜಕ್ಕೆ ದೈವತ್ವವನ್ನು ದೊರಕಿಸಿ, ಕೊಟ್ಟ ಮಹಾನುಭಾವ; ರಾಜಯೋಗಿಸಿದ್ಧರಾಮನು ಶಿವ ಪೂಜಾ ಧುರಂಧರರಾದ ಮೊರಡಿಯ ಮುದ್ದಣ್ಣ—ಸುಗ್ಗವ್ವೆಯರೆಂಬ, ದಂಪತಿಗಳ ಉದರದಲ್ಲಿ ಸುವರ್ಣ ಪುರದೊಳಗೆ, ಬಸವಣ್ಣನವರ ಸಮಕಾಲೀನನಾಗಿ ಜನಿಸಿದನು.

ಸಿದ್ಧರಾಮನಲ್ಲಿ ಶಿವಭಕ್ತಿಯು, ಬಾಲ್ಯದಲ್ಲಿಯೇ ಕಾಣಿಸಿಕೊಂಡಿತು. ಅವನು ದಿನದಿನಕ್ಕೆ ಬೆಳೆಯತೊಡಗಿದಂತೆ ಅದೂ ಬೆಳೆಯ ತೊಡಗಿತು.

ಕೊನೆಗೊಂದುದಿನ ಕನಸಿನಲ್ಲಿಮಲ್ಲಯ್ಯ (ಮಲ್ಲಿಕಾರ್ಜುನನು)ಬಂದ "ನೀನು ಸೊನ್ನಲಾಪುರವನ್ನು ನಿರ್ಮಿಸು. ಅಲ್ಲಿ ಗುಡಿ ಗುಂಡಾರ, ಕೆರೆ, ಭಾವಿಗಳನ್ನು ಕಟ್ಟಿಸು. ಕಾರ್ಯವನ್ನು ಪ್ರಾರಂಭ ಮಾಡಿದಾಗ ಅಲ್ಲಿ ನಿನಗೆ ಅಕ್ಷಯ ನಿಧಿ ದೊರೆಯುವದು"ಎಂದು ಹೇಳಿದಂತಾಯಿತು.

ಅದೇ ರೀತಿ ಸಿದ್ಧರಾಮನು ಕಾರ್ಯೋನ್ಮುಖನಾಗಲು, ಅವನಿಗೆ ನಿಜಕ್ಕೂ ನಿಧಿಯು ದೊರಕಿತು ಅದರಿಂದಲೇ ಅವನು ಮಂದಿರಗಳನ್ನು ಕಟ್ಟಿಸುವ, ಕೆರೆ ಕಡಿಸುವ ಕಾರ್ಯಗಳನ್ನು ಪ್ರಾರಂಭಿಸಿದನು. ಆ ಕಾರ್ಯವು ಭರದಿಂದ ನಡೆದಿರುವಾಗಲೇ ಮುಕ್ತಾಯುಕ್ತ, ಗೊಗ್ಗಯ್ಯ ಮುಂತಾದವರಿಗೆ ಉಪದೇಶಾಮೃತವನ್ನುನೀಡಿದಪ್ರಭುದೇವರುಸೊನ್ನಲಾಪುರಕ್ಕೆಆಗಮಿಸಿದರು.

ಸಿದ್ಧರಾಮನಂಥ ಶರಣನು ಕೆರೆ ಭಾವಿಗಳನ್ನು ಕಡಿಸುವಲ್ಲಿ ಮಂದಿರಗಳನ್ನು ಕಟ್ಟಿಸುವಲ್ಲಿ ತನ್ನ ಶಕ್ತಿಯನ್ನು ವ್ಯಯಗೊಳಿಸುತ್ತಿರುವದು ಪ್ರಭುದೇವರ ಮನಸ್ಸಿಗೆ ಬರಲಿಲ್ಲ.

"ಧರೆಯ ಮೇಲೊಂದು ಪಿರಿದಪ್ಪ ಸಂತೆಯು ನೆರವಿಗೆ ಬಂದವರನೇನೆಂಬೆನು ? ಪರಿಪರಿಯ ಭಂಡದ ವ್ಯವಹಾರದೊಳಗೆ ಕೊಡಲಿಲ್ಲ, ಕೊಳಲಿಲ್ಲ; ವೃಥಾ ವಿಲಾಸವಿದೇನೊ ? ಅರಿ ಮರುಳೆಂಬ ಶಿವನು ನೆರೆ ಮರುಳೆಂಬ ಜಗವ ಹುಟ್ಟಿಸಿದ, ಪರಿಯಕಂಡು ಬೆರಗಾದೆ ಗುಹೇಶ್ವರಾ. !

"ಸಾಗರದೊಳಗಿಪ್ಪ ಪ್ರಾಣಿಗಳು ಮತ್ತೊಂದೆಡೆಯಲ್ಲಿ ಇರಬಲ್ಲುವೇ ? ಭವಸಾಗರದೊಳಗಿಪ್ಪ ಜೀವಿಗಳಿಗೆ ಅದೇ ಗತಿಯಲ್ಲದೆ ಬೇರೆ ಮತ್ತೊಂದೆಡೆಯುಂಟೇ ? ಗುಹೇಶ್ವರನ ಲೀಲೆ ಜಗನ್ಮಯವಾದೊಡೆ ನಾನು ಬೆರಗಾದೆನು."

"ಕಲ್ಲ ದೇವರ ಮಾಡಿ ಕಲ್ಲ ಮನೆಯ ಮಾಡಿ ಆ ಕಲ್ಲು ಕಲ್ಲಿನ ಮೇಲೆ ಕಡೆವರೆ ದೇವರೆತ್ತ ಹೋದರೋ ? ಲಿಂಗ ಪ್ರತಿಷ್ಠೆಯ ಮಾಡುವವರಿಗೆ ನಾಯ ನರಕ ತಪ್ಪದು. ಗುಹೇಶ್ವರಾ !

"ದೇಹವೇ ದೇಗುಲವಾಗಿರಲು, ಬೇರೆ ಮತ್ತೆ ದೇಗುಲವೇಕಯ್ಯಾ ? ಪ್ರಾಣವೇ ಲಿಂಗವಾಗಿರಲು, ಬೇರೆ ಮತ್ತೆ ಲಿಂಗವೇಕಯ್ಯಾ? ಕೇಳಲಿಲ್ಲ ಗುಹೇಶ್ವರ, ನೀನು ಕಲ್ಲಾದರೆ ನಾನೇನಪ್ಪೆನಯ್ಯಾ ?"

"ತನುವೆಂಬ ಏರಿಗೆ ಮನವೆಂಬ ಕಟ್ಟೆ, ಆಚಾರವೆಂಬ ಸೋಪಾನ, ಪರಮಾನಂದವೆಂಬ ಜಲವ ತುಂಬಿ, ಕೆರೆಯ ಕಟ್ಟಬಲ್ಲವರನಾರನು ಕಾಣೆ. ನಾನು ಕಟ್ಟಿದ ಕೆರೆ ಸ್ಥಿರವಾಯ್ತು ಗುಹೇಶ್ವರ ನಿಮ್ಮಾಣೆ"

ವಿಡಂಬನ ಕೆರೆಯ ಕಟ್ಟಿಸುವ ವಡ್ಡನ ಪ್ರತಾಪವನೇ ನೆಂಬೆನಯ್ಯಾ ? ನೆಲವಗಿದು ಜಲವ ತೆಗೆದೆನೆಂಬ ಬಳಲಿಕೆಯ ನೋಡಾ! ಒಂದು ಕಲ್ಲ ಕಡಿದು ಮತ್ತೊಂದು ಕಲ್ಲಿಗೆ ಭೋಗವ ಕೊಟ್ಟೆಹೆನೆಂಬ ಅಜ್ಞಾನವಿದೇನೋ, ಗುಹೇಶ್ವರಾ ? ಈ ಇರವಿನ ಪರಿಗೆ ಬೆರಗಾದೆನು.

ಎಂದು ಸಿದ್ಧರಾಮನ ಬಗೆಗೆ ನಾನಾ ಪರಿಯಾಗಿ ಮರುಗಿದರು ಕೊನೆಗೆ ಅವನ ಕಣ್ಣು ತೆರೆಯಿಸಬೇಕೆಂಬ ಉದ್ದಿಶ್ಯದಿಂದ ಕೆರೆಕಡಿಯುತ್ತಿರುವ ಒಡ್ಡನ ಬಳಿ ಹೋಗಿ—

"ಒಳಗೆ ತೊಳೆದು ಜಲವ ತುಂಬಲರಿಯದ ಅರಿ ಮರುಳನೇನಾದ ಹೇಳಿ ಜಲದ ಸಂಗವ ತೊಳೆಯಲರಿಯದೆ ಜಲವ ಬಯಸುವ ನಿಂತಿರ್ದಹ ಹೇಳಿರಿ! ನೆಲವ ಶೋಧಿಸಿ ನೆಲೆಯ ನರಿಯದೆ ಕೆರೆಯ ಕಟ್ಟಿಸುವ ಒಡ್ಡರಾಮಯ್ಯ ಇರವೆಂತು ಹೇಳಿರೇ ? ನಮ್ಮ ಗುಹೇಶ್ವರನ ನಿಲವನರಿಯದು ಸಿದ್ದರಾಮನೆಂತಿರ್ದಹ ಹೇಳಿರೇ ?"

ಎಂದು ಪ್ರಶ್ನಿಸಿದರು, ತಮ್ಮ ಅನ್ನದಾತನೂ ಸಿದ್ಧನೂ ಆದ ತಮ್ಮೊಡೆಯ ಸಿದ್ಧರಾಮನನ್ನು ಓರ್ವ ಬೈರಾಗಿಯು "ಒಡ್ಡ ರಾಮ" ನೆಲ್ಲಿಹನೆಂದು ಕೇಳಿದಾಗ ಅಲ್ಲಿಯ ಕೆಲಸಗಾರರಿಗೆ ವಿಪರೀತ ಕೋಪಬಂದಿತು. ಪ್ರಭುದೇವರ ಮೇಲೆ ಕಲ್ಲುಗಳ ಮಳೆಗರೆದರು, ಆದರೆ ನಿರ್ದೇಹಿಗಳಾದ ಅವರಿಗೆ ಕಲ್ಲುಗಳೇ ಏಕೆ ? ಅಗ್ನಿಯು ಕೂಡ ಏನೂ ಮಾಡುವಂತಿರಲಿಲ್ಲವೆಂಬುದು ಪಾಪ ಅವರಿಗೇನು ಗೊತ್ತು ? ಆಗ ಪ್ರಭು ದೇವರು....

"ಗುರುವೆಂದರಿಯರು, ಹಿರಿಯರೆಂದರಿಯರು, ದೇವರೆಂದರಿಯರು, ಭಕ್ತರೆಂದರಿಯರು, ಲಿಂಗವೆಂದರಿಯರು, ಜಂಗಮವೆಂದರಿಯರು, ಬಂದವರ ನರಿಯರು, ನಿಂದವರ ನಿಲವ ನರಿಯರು. ಶಿವಶರಣರ ನೋಯಿಸುವ ಪಾತಕರ ನೇನೆಂಬೆ ? ಗುಹೇಶ್ವರ ನಿಮ್ಮ ಮನನೊಂದ ನೋವು ಬರಿದೆ ಹೋಗದು"

"ಸಹಜೀವ ನುಡಿದರೆ ಸೇರುವದಿಲ್ಲ. ಕಾಣ್ಣಿರಂಣ ಆ ಸಹಜಕ್ಕಲ್ಲಿದೆ ಲೋಕ ಭಜಿಸದು. ಕೆರೆಯ ಕಟ್ಟಿಸುವವನ ಕಂಡು ಒಡ್ಡರಾಮಯ್ಯನೆಂಪರೆ ಮುಳ್ಳಿನಿಂದ ಲಿಂಗ ತನುವ ನೋಯಿಸುವರೆ ? ನಮ್ಮ ಗುಹೇಶ್ವರ ಲಿಂಗವು ಜಗದೊಳಗೆ ಪರಿಪೂರ್ಣವಾದ ಕಾರಣ ಶರಣನ ನೋವು ಮರಳಿ ಪಾತಕರ ತಾಗಿದರೆ ಅಲ್ಲಯ್ಯ ನೋಡಿ ನಗುತಿರ್ದನು"

"ತಾಯಿಗಾದ ಸುಖ ದುಃಖಗಳು ಬಸಿರು ಶಿಶುವಿಗೆ ನೋಡಯ್ಯಾ. ಶಿವಶರಣರಿಗೆ ಮಾಡಿವ ಸುಖ ದುಃಖಂಗಳು ತಾಗುವವು. ಕರುಣವುಳ್ಳವರು, ಮರಣವಿಲ್ಲದವರಿಗೆ ಮುನಿದರ ತನುವುಳ್ಳವರ ಮುಟ್ಟಪದಲ್ಲದೆ, ಒಡಲಿಲ್ಲ. ತಾತನ ಮುಟ್ಟ ಬಲ್ಲದೆ ? ಗುಹೇಶ್ವರ, ಕೆಂಡವ ಗೊರಲೆ ಮುಟ್ಟ ಬಲ್ಲುದೆ?"

"ಜಗದ ಜಿನವ ಹಿಡಿದುಕೊಂಡು, ಒಂದು ಉಪದೇಶ ಮಾಡಿವ ಗುರು ವಿಂಗೆ, ಆ ಉಪದೇಶವ ಕೊಟ್ಟು ಕೊಂಡವಾರಿಂಗೆ ಹೋಹುದಗಲ್ಲಿದೆ, ಅಲ್ಲಿ ನಿಜಿವಳವಡಿದು. ತೆರನರಿಯದ ಸಂಸಾರ ಜೀವಿಗಳು ಮಾಡಿವ ದೋಷ ತಮ್ಮ ನುಂಗಿ, ಆ ಗುರುವಿಂಗೆ ಉಪಹತಿಯು ಮಾಡುವದು ನೋಡಾ ಗುಹೇಶ್ವರ ತಾ ನಿಟ್ಟ ಬೇತಾಳ ತನ್ನನೆ ತಿಂದರೆಬೇಕು, ಬೇಡನಲುಂಟೆ ?"

ಎಂದು ನಿಶ್ಚಲರಾಗಿ ನಿಂತುಕೊಳ್ಳಲು ಆ ವಡ್ಡರು ಗಾಬರಿಯಾಗಿ ಇವ ನಾರೋ ಮಾಂತ್ರಿಕನು, ಇವನಿಗೆ ಕಲ್ಲು ಗುಂಡುಗಳು, ತಾಗಲೊಲ್ಲವು. ಆದ ಕ್ಕಾಗಿ ನಮ್ಮೊಡೆಯನಾದ ಸಿದ್ಧರಾಮನಿಗೆ ಈ ಸಂಗತಿಯನ್ನು ಅರುಹ ಬೇಕೆಂದು. ನಿರ್ಧರಿಸಿ, ಅವನಿಗೆ ಹೋಗಿ ನಡೆದುದೆಲ್ಲವನ್ನು ವಿವರಿಸಿದರು. ತನ್ನ ನಿಂದಕನೋರ್ವನು ಬಂದಿರುವದನ್ನು ಕಂಡು ಸಿದ್ಧರಾಮನಿಗೆ ಅತೀವ ಕೋಪ ಬಂದಿತು—

"ಎಲೆಯಯ್ಯ ! ನಮ್ಮವರ ನೋವೆ ಎನ್ನ ನೋವು ನೋಡಾ, ಕಂಡು ಕಂಡು ಸೈರಿಸಲಾರದೆ ನೊಂದೆನಯ್ಯಾ! ನಿಮ್ಮವರೊಡನೆ ವರ ಸೊರಸಾಗಪ್ಪರ ಕಂಡರೆ ನಾನವರಿಗೆ ಮುನಿವೆ ನೋಡಾ, ಕಪಿಲ ಸಿದ್ಧಮಲ್ಲಿನಾಥ ನೀನವರ ಲ್ಲಿಪ್ಪೆ, ಅವರಾಗಿ"

"ಬ್ರಹ್ಮನಾದಡಾಗಲಿ, ವಿಷ್ಣುವಾದಡಾಗಲಿ, ಇಂದ್ರನಾದಡಾಗಲಿ ಚಂದ್ರನಾದಡಾಗಲಿ, ಎಮ್ಮ ಶಿವಶರಣನ ನೋವು ಎಮ್ಮ ನೋವು ನೋಡಾ! ಅವರನೊರಸುವೆ ಸುರುಹುವೆನೆಂದು ಕಪಿಲ ಸಿದ್ಧಮಲ್ಲಿಕಾರ್ಜುನ ತನ್ನನೊಸಲ ಕಂಣಿಗೆ ಬೆಸಸನಿತ್ತರೆ ನಿಲಬಲ್ಲಿ ಗುರುವರನಾರನು. ಕಾಣೆ"

ಎಂದು ನುಡಿಸು ಸಿದ್ಧರಾಮನು ತನ್ನ ಕ್ರೋಧಾಗ್ನಿಯಿಂದಲೇ ಬಂದಿರುವ ಬೈರಾಗಿಯನ್ನು ಸುಟ್ಟು ಹಾಕುವೆನೆಂದು ಬಂದನು. ಆ ಸಿಟ್ಟು ಆ ವ ನ ಲ್ಲಿ ಕೊನೆಯವರೆಗೂ ಉಳಿಯಲಿಲ್ಲ. ವಾಗ್ವಾದದಲ್ಲಿಯೇ ಈತನು ಮಹಾಪುರುಷನು, ತನ್ನನ್ನು ಉದ್ಧರಿಸಲು ಬಂದ ಮಹಿಮನೀತನೆಂದು ಗುರುತಿಸಿದ ಸಿದ್ಧರಾಮನು—

"ಅರಲುಗೊಂಡ ಕೆರೆಗೆ ತೆರೆಬಂದು ಹಾಯಿದಂತೆ ಎಲೆ ಅಯ್ಯ ನಿಮ್ಮ ಕಂಡು ಕರಿಗಳು ಕಡೆಗೋಡಿವರಿದವಯ್ಯ! ಎನ್ನ ಮನಕ್ಕೆ ಮನವೇದ್ಯವಾದರೆ ಕೈ ಮರೆದೆನಲೆ ಹಾ, ಅಯ್ಯ. ಕಪಿಲ ಸಿದ್ಧಮಲ್ಲಿನಾಥನ ಕಂಡ ಸುಖವು ಆರಿಗೆಯು ಇಲ್ಲ"

"ಅಯ್ಯ ನಿಮ್ಮ ಕಂಡು ಕಂಗಳು ನೋಡಲಮ್ಮದೆ ಬೆಚ್ಚಿ ಬೆ ಹ ರಿ ಪವಯ್ಯ ! ನೀನು ಶತಕೋಟಿ ಸೂರ್ಯ ಪ್ರಕಾಶಕ್ಕತೀತನು, ನಿನ್ನ ಕಂಡ ಬಳಿಕ ಕರ್ಮ ಉಂಟೆ ಕಪಿಲ ಸಿದ್ಧಮಲ್ಲಿಕಾರ್ಜುನ ?"

"ಎಲೆ ಅಯ್ಯ ! ಎನ್ನ ಶಿರ ನಿಮ್ಮ ಚರಣವ ಮುಟ್ಟಿದ ಬಳಿಕ, ಎನ್ನಲ್ಲಿ ಗುಣ ದೋಷವ ನರಸುವರೇ ? ಭೃತ್ಯಾಪರಾದ ಸ್ವಾಮಿನೋ ದಂಡ ಕಪಿಲ ಸಿದ್ಧ ಮಲ್ಲಿಕಾರ್ಜುನ ದೇವ ತ್ರಾಹಿ, ತ್ರಾಹಿ ಕಾಯಯ್ಯ"

ಎಂದು ಪರಿ ಪರಿಯಾಗಿ ಬೇಡಿಕೊಳ್ಳುತ್ತಿರಲು ಪ್ರಭುದೇವರು "ಕಾಯಗೊಂಡ ಮಾನವರಂತೆ ಕೈಗೆ ಸಿಲುಕ, ಪ್ರಾಣವಿಡಿದ ಜೀವಿಗಳಂತೆ ಎಡೆಯಾಡದಿಪ್ಪ, ಕಾಂಬಡೆ ಕರಿಗಳತೆ ಇಲ್ಲ. ಕೇಳುವಡೆ ಕಿವಿಗಳತೆಯಿಲ್ಲ. ಗುಹೇಶ್ವರನ ನಿಲುವು ಬರಿಯ ಸ್ತೋತ್ರಕ್ಕೆ ನಿಲುಕದು, ಕಾಣಾ ಸಿದ್ಧರಾಮಯ್ಯ"

"ಕಂಣಿಗೆ ಕಾಂಬಡೆ ರೂಪಲ್ಲ. ಕೈಗೆ ಸಿಲುಕುವರೆ ದೇಹಿಯಲ್ಲಿ ನಡೆದಡೆ ಗಮನಿಯಲ್ಲ. ನುಡಿದಡೆ ವಾಚಾಳನಲ್ಲ. ನಿಂದಿಸಿದವಗೆ ಹ ಣಿ ಯ ಲ್ಲಿ,

ಹೊಗಳಿವವಗೆ ಕಳೆಯಲ್ಲಿ ಗುಹೇಶ್ವರನ ನಿಲುವು ಮಾತಿನ ಮಾತಿಗೆ ಸಿಲುಕು ವದೆ ? ಸಿದ್ಧರಾಮಯ್ಯ ನೀನು ಮರುಳಾದೆಯಲ್ಲ !"

ಎಂದು ಸಿದ್ಧರಾಮನ ಮನಸ್ಸೋಯುವಂತೆ ಮಾತನಾಡಲು ಸಿದ್ಧರಾಮನು ತುಟಿ ಅಲುಗಾಡಿಸದೆ ಪ್ರಭುದೇವರ ಪಾದಗಳ ಮೇಲೆ ಬಿದ್ದು; ನೀನೇ ಗತಿ ಎಂದು ಕೇಳಿಕೊಂಡನು. ಆಗ ಪ್ರಭು ದೇವರು—

"ಹೊರ ಗಾಡಿಬಂದನೆಂದು ನುಡಿಸಲೊಲ್ಲದೆ ಸುಮ್ಮನಿದ್ದೆನು. ಎನ್ನ ಮನಸ್ಸೊಂದು ತಾಗಿದರೆ, ನಿಮ್ಮತ್ತ ಮುಂದಾದೆನು, ಬಿಕ್ಕುತ್ತ ಬೆದರುತ್ತ ಕಾಲ ಮೇಲೆ ಬಿದ್ದರೆ ಕಂಗಳ ಉದಿಕ ಮಜನಕ್ಕೆರೆದಂತಾಯ್ತು ಅಂತಿದ್ದರೆ ಕಂಡು ನೆಗಹಿಡಿದೆನು, ನಮ್ಮ ಗುಹೇಶ್ವರ ಲಿಂಗವು"

ಎಂದು ನುಡಿದು ಸಿದ್ಧರಾಮನನ್ನು ಮೇಲಕ್ಕೆಬ್ಬಿಸಿದರು. ಸಿದ್ದರಾಮನ ಕಂಣುಗಳಿಂದ ನೀರು ಧಾರಾಕಾರವಾಗಿ ಸುರಿಯುತ್ತಿತ್ತು. ಅದನ್ನು ಪ್ರಭು ದೇವರು ತೊಡೆಯಲು, ಸಿದ್ಧರಾಮನು ಪುಳುಕಿತನಾಗಿ—

"ಎನ್ನ ತನುಕರಗಿ ಮನಕೊರಗಿದ ದುಃಖವಿದಾರದಯ್ಯ ! ಅಯ್ಯಯ್ಯ ಎಂದು ಅಳುವದಕ್ಕೆ ಇದಾರದಯ್ಯ ! ಮರಹೆಂಬ ಕೊರಸಿಗೆ ಗುರಿಮಾಡಿದವ ರಾರಯ್ಯ ! ಹಾ, ಹಾ, ಎಂಬ ಧ್ವನಿಯ ಕೇಳಲಾರದೆ ಕಂಡು ಕರುಣದಿಂದೆ ಶಿರವ ಹಿಡಿದೆತ್ತಿ ಎನ್ನ ಕಂಣ ನೀರ ತೊಡೆದನು, ಕಪಿಲ ಸಿದ್ಧಮಲ್ಲಿನಾಥನಯ್ಯನು"

ಎಂದನ್ನಲು ಪ್ರಭು ದೇವರು ಅತ್ಯಂತ ಪ್ರಸನ್ನ ಚಿತ್ತರಾಗಿ—

"ಹೇ ಸಿದ್ಧರಾಮ ! ನೀನು ಪರಮಯೋಗಿ; ಶುದ್ಧ ಸಾತ್ವಿಕಯೋಗಿ, ಶಿವಯೋಗಾಮೃತ ಸೇವ್ಯ ಸಂತುಷ್ಟಯೋಗಿ! ಪರಮಾನಂದಯೋಗಿ, ಸಕಲ ಕರಣ ಗುಣ ರಹಿತ ಯೋಗಿ, ಸರ್ವೇಂದ್ರಿಯ ಸುಖನಿರ್ಮಲ ಯೋಗಿ, ಸಂಸಾರವನ ದಾವಾ ನಲಯೋಗಿ, ಮಾಯಾ ಹರಯೋಗಿ, ಮಾಯಾಮದ ದೂರ ಮಾಯಾ ಮದ ಮಥನಯೋಗಿ, ಸಕಲ ನಿಃಕಲತತ್ವ ಶಿರೋರತ್ನ ಯೋಗಿ, ಅಪ್ರತರ್ಕ್ಯ, ಚಾರಿತ್ರ ಯೋಗಿ, ಅಸಾಧ್ಯ ಸಾಧಕ ಯೋಗಿ, ಅಬೇಧ್ಯಬೇಧಕ ಯೋಗಿ, ಕಾಯ ಗುಣ ಧರ್ಮ, ಕರ್ಮ ಸಂಹಾರ ಯೋಗಿ,

ಚೈತನ್ಯಯೋಗಿ, ಸುಜ್ಞಾನ ಪ್ರಭಾಮಯಯೋಗಿ, ಮಹಾ ಜ್ಞಾನೈಕ್ಯ ಚೈತ್ಯ ಯೋಗಿ, ಸುಗುಣಯೋಗಿ, ಸನ್ನಿಧಾನಯೋಗಿ, ನಿರ್ಗುಣಯೋಗಿ, ನಿರಂಜನ ಯೋಗಿ, ಬ್ರಹ್ಮಾಂಡ ಸಂದೋಹ ಸುಭೂತ ಕಾರಣ ಯೋಗಿ ನಿ ರ ಪ ಯ ನಿರ್ಲೇಪ ನಿಃಪಾಪಯೋಗಿ, ಇಹಲೋಕ, ಪರಲೋಕ ಗತಿ-ರಹಿತಯೋಗಿ.."

ಎಂದು ನಾನಾ ವಿಧವಾಗಿ ಅವನನ್ನು ಹೊಗಳುತ್ತ ಬಿಗಿದಪ್ಪಿಕೊಂಡು.

"ನಿಮ್ಮಲ್ಲಿ ಸನ್ನಿಹಿತನಾಗಿ, ನಿಜವ ನರಿತು, ಬೆರಸಿದ ಶಿವಯೋಗಿಯ ಕಂಡರೆ ಎನ್ನ ಮನವಗಲಾರದಯ್ಯ! ಎನ್ನ ತನು ಒಪ್ಪದಿರಲಾರದಯ್ಯ! ಎನ್ನ ಶಬುದ ಹೊಗಳಿದಲ್ಲದೆ ಸೈರಸದಯ್ಯ ಗುಹೇಶ್ವರ, ನಿಮ್ಮ ಶರಣ ಸಿದ್ಧರಾಮ ಯ್ಯನ ನಪ್ಪಿ ನೊಪ್ಪಿಳಿದು, ನಮೋ ನಮೋ ಎನುತಿರ್ದೆನು.

"ಕಾಯದೊಳಗೆ ಕರುಣವಿಲ್ಲ. ಪ್ರಾಣದೊಳಗೆ ಭಾವವಿಲ್ಲ. ಬಾವದೊ ಳಗೆ ಭ್ರಮೆಯಿಲ್ಲ ನವನಾಳದೊಳಗೆ ಸುಳುಹು ಮುನ್ನಿಲ್ಲ. ಬ್ರಹ್ಮರಂಧ್ರದಲ್ಲಿ ಅರಿವಂತ ಶಿವಯೋಗಿ ಗುಹೇಶ್ವರನ ಶರಣ ಸಿದ್ಧರಾಮಯ್ಯ ನಿನ್ನ ಕಂಡೆನ್ನ ಭವಂನಾಸ್ತಿಯಾಯಿತ್ತು ಕೇಳಾ !"

"ಯೋಗ ಶಿವಯೋಗವೆಂದೆಂಬರು, ಯೋಗದ ಹೊಲಬನಾರು ಬಲ್ಲ ರಯ್ಯಾ! ಹೃದಯ ಕಮಲ ಪತ್ರದಲ್ಲಿ ಭ್ರಮಿಸುವನ ಕಳೆದಲ್ಲದೆ ಯೋ ಗ ವೆಂತಪ್ಪುದೋ? ಐವತ್ತೆರಡಕ್ಷರ ಲಿಪಿಯ ನೋಡಿ, ನೋಡಿ, ಸೊಹಂ ಮೆಂಬಲ್ಲಿ ಸುಳುಹಡಗಿ, ಮನನಷ್ಟವಾಗಿರ ಬಲ್ಲ ಕಾರಣ ಗುಹೇಶ್ವರ ಲಿಂಗ ದಲ್ಲಿ ನೀನು ಸ್ವತಂತ್ರ ಧೀರನೆಂಬುದು ಕಾಣ ಬಂದಿತ್ತು. ಕಾಣಾ ಸಿದ್ಧ ರಾಮಯ್ಯ."

ಎಂದು ಗದ್ಗದಿತರಾಗಿ ನುಡಿದರು. ಪ್ರಭುಗಳು ತನ್ನನ್ನು ಹೊಗಳಿದ್ದು. ಅತಿಯಾಯಿತೆಂದು ಸಿದ್ಧರಾಮನಿಗನ್ನಿಸಿತು. ಆಗ ಅವನು—

"ಯೋಗದ ಹೊಲಬ ನಾನೆತ್ತ ಬಲ್ಲೆನಯ್ಯ! ಯೋಗ ಶಿವಶಕ್ತಿ ಸಂಪುಟ ವಾಗಿಪ್ಪುದಲ್ಲದೆ. ಶಿವಶಕ್ತಿ ವಿಯೋಗವಾದ ಯೋಗವಿಲ್ಲವಯ್ಯ! ಹೃದಯ ಕಮಲದಲ್ಲಿ ಭ್ರಮಿಸದೆ ಇಪ್ಪಾತ ನೀನೆಯಲ್ಲದೆ ಎನಗೆ ಬೇರೆ ಸ್ವತಂತ್ರವಿಲ್ಲ. ಕೇಳಾ ಕಪಿಲ ಸಿದ್ಧಮಲ್ಲಿಕಾರ್ಜುನಾ !"

"ಉತ್ಪತ್ತಿ, ಸ್ಥಿತಿ, ಲಯಗಳಿಲ್ಲದ, ಭವ ನೀನು, ಕಂಡಯ್ಯ ! ಎನಗೆ ಬೇರೆ ಸ್ವತಂತ್ರರಿಲ್ಲ ಕೇಳಾ! ನಿನ್ನ ಇಚ್ಛಾ ಮಾತ್ರದಿಂದ ನಾನಿಪ್ಪೆನು ಹಿರಿಯ ನೀನೇ ದೇವಾ, ಕಪಿಲ ಸಿದ್ಧಮಲ್ಲಿಕಾರ್ಜುನ ನಾನೇ ತರೊಳಗಪ್ಪೆನು, ಪ್ರಭುವೇ !"

ಎಂದು ಬಿನ್ನವಿಸಿಕೊಂಡನು. ಇದೀಗ ಸಿದ್ಧರಾಮನ ಕಂಣುಗಳು ತೆರೆದಿರುವವೆಂದು ಪ್ರಭುಗಳಿಗೆ ಆನಂದವಾಯಿತು. ಅವರು—

"ಮನ ಮನ ಬೆರಸಿದವರೆಂತಿಪ್ಪವರ ಪರಿಯ ನರಿಯ, ಬಾರದು ಕೇಳಾ! ಇದಿರಿಂಗೆ ಇಚ್ಛೆಯರಿಯದಿಪ್ಪರು, ಒಳಗೆ ನೋಡಿದರೆ ಬಟ್ಟ ಬಯಲಲಿಪ್ಪರು, ಗುಹೇಶ್ವರನ ಶರಣರು ತಾವಿಲ್ಲದ ಮಹಿಮರೆಂಬುದ ನಿನ್ನಿಂದರಿದೆ ನೋಡಾ, ಸಿದ್ಧರಾಮಯ್ಯ. !"

ಎಂದರು ಹಾಗು ಇಂತಹ ಮಹಿಮನಾದ ನೀನು ಗುಡಿ, ಗುಂಡಾರಗಳನ್ನು ಕಟ್ಟಿಸುವಂಥ ವ್ಯಾಮೋಹಕ್ಕೆ ಏತಕ್ಕೆ ಸಿಲುಕಿದೆ ಎಂಬುದನ್ನು—

"ಬಯಸುವ ಬಯಕೆ ನೀನಾದ ಪರಿ ಎಂತು. ಹೇಳಾ ! ಅರಸುವ ಅರಿಕೆ ನೀನಾದ ಪರಿ, ಎಂತು ಹೇಳಾ ! ಕಾಯವೆ ಲಿಂಗ ಪ್ರಾಣವೆ ಶರಣನಾದ ಶರಣಂಗೆ ಬೇರೆ ದೇವಾಲಯ ಮಾಡಿಸಲೇಕೆ ಹೇಳಾ ? ಗುಹೇಶ್ವರ ಲಿಂಗವು ಸಾಧ್ಯವಾಯಿತ್ತೆಂಬುದ ಮಾತಿನಲ್ಲಿ ಕಂಡೆನಲ್ಲದೆ. ಕಾರ್ಯದಲ್ಲಿ ಕಾಣೆ ನೋಡಾ ಸಿದ್ಧರಾಮಯ್ಯ."

ಎಂದರು ಸಿದ್ಧರಾಮನೇನು ಬೆಪ್ಪು ತಕ್ಕಡಿಯಾಗಿರಲಿಲ್ಲ. ಅವನೂ ಮಹಾ ಶಿವ ಭಕ್ತ, ಅಲ್ಲದೆ ಪ್ರಭುಗಳು ಆಡಿದ್ದಕ್ಕೆಲ್ಲ ತಲೆದೂಗುವವನಾಗಿರಲಿಲ್ಲ. ಮಂದಿರಗಳನ್ನು ಏತಕ್ಕೆ ಕಟ್ಟಿಸಿದೆ, ಎಂದು ಪ್ರಭು ದೇವರು ಕೇಳಲು ಸಿದ್ಧರಾಮನು—

"ಅಣುವಿನೊಳಗೆ ಅಣುವಾಗಿಪ್ಪರೆ ಎಲೇ ದೇವಾ ನೀವು ಜಗದೊಳಗೆಲ್ಲಿಯು ನೀವಿಲ್ಲದೆಡೆಯುಂಟೆ ? ಎಂಭತ್ತು ನಾಲ್ಕು ಲಕ್ಷ ಶಿವಾಲಂಯುಂಗಳ ನೀವು ಮೂಡಿ ಒಳಗಿಪ್ಪುದ ಕಂಡು ನಾನು ಮಾಡಿದೆ ನಲ್ಲದೆ ಕಪಿಲ ಸಿದ್ಧ ಮಲ್ಲಿನಾಥಯ್ಯ ಎನಗೆ ಬೇರೆ ಸ್ವತಂತ್ರವಿಲ್ಲವೆಂದರಿಯೆನು."

ಎಂದು ನುಡಿದನು. ಆಗ ಪ್ರಭು ದೇವರು—

"ಕಡೆನಾಡ ಲಿಂಗವ ನಡುನೀರಿಗೆ ತಂದೆನೆಂದೆಂಬ ಅಹಂಕಾರ ಮುಂದು ಗೊಂಡು ಇದ್ದೆಯಲ್ಲ ! ಎಂಭತ್ತುನಾಲ್ಕು ಲಕ್ಷ ಶಿವಾಲಯಗಳೆಂಬ ಬಯಲು ಭ್ರಮೆ ಇದೇನು ಹೇಳಾ ! ಆ ಮಹಾಘನ ಲಿಂಗಕ್ಕೆ ಜಗದ ಜೀವ ರಾಶಿಗಳು ಶಿವಾಲಯವ ಮಾಡಬಲ್ಲವೇ ? ನಿನ್ನ ಲಕ್ಷದ ಮೇಲೆ ತೊಂಭತ್ತಾರು ಸಾವಿರ ಲಿಂಗವ ನಿನ್ನ ಎದೆಯಲ್ಲಿ. ಇರಿಸಿಕೊಳ್ಳಲರಿಯದ ಕಾರಣ ಗುಹೇಶ್ವರ ಲಿಂಗವು ನಿನ್ನ ತಪ್ಪಿಸಿ ಹೋದುದ ಮರೆದೆಯಲ್ಲ; ಸಿದ್ಧರಾಮಯ್ಯ !"

ಎಂದರು ಆಗ ಸಿದ್ಧರಾಮನು ಒಂದು ನಿಮಿಷವೂ ಹಿಂದು ಮುಂದು ನೋಡದೆ—

"ಸಕಲ ಲಿಂಗವ ಹಿಡಿದು ಅಗಲದೆ ನಡೆ ಎಂದಿರಾಗಿ ನಡೆವುತ್ತಿರ್ದೆನು ಲಿಂಗ ಪ್ರತಿಷ್ಠೆಯ ಮಾಡೆಂದು ಎನಗೆ ನಿರೂಪಿಸುತ್ತಿರ್ದ ಕಾರಣ ಮಾಡುತಿರ್ದೆನಲ್ಲದೆ, ಎನಗೆ ಬೇರೆ ಸ್ವತಂತ್ರ ಉಂಟೆ ? ಹಿಂದೆ ನೀವು ಕೊಟ್ಟ ನಿರೂಪ ನಿಮಗೆ ಹುಸಿಯಾದಡೆ ಇನ್ನು ಮುಂದೆ ಸ್ವಯವಪ್ಪಂತೆ ನಡಿಸಾ ಕಪಿಲ ಸಿದ್ಧ ಮಲ್ಲಿನಾಥಯ್ಯ ?

"ಕೃಪೆಯ ಮಾಡಿ ಉಣ್ಣದೆ ಹಸಿವು. ಹರಿವ ಪರಿ ಇನ್ನೆಂತೊ ? ಬೇಯದೆ ಆಶ ನವನುಂಬಿ ತಾವಾವುದು, ಕಪಿಲ ಸಿದ್ಧ ಮಲ್ಲಿಕಾರ್ಜುನ ಲಿಂಗಕ್ಕೆ ?

"ಕೈಯಲ್ಲಿ ಹಿಡಿದು ಕಾಂಬುದು ಕರ್ಮದ ಪೂಜೆಯಲ್ಲವೆ ? ಮನದಲ್ಲಿ ನೆನೆದು ಮೂಡುವದೆಲ್ಲವು ಕಾಯದ ಕರ್ಮವಲ್ಲವೆ ? ಭಾವ ಶುದ್ಧವ ನಂಬ ಪರಿ ಇನ್ನಾವುದು ಕಪಿಲ ಸಿದ್ಧ ಮಲ್ಲಿಕಾರ್ಜುನ ?"

—ಎಂದನು. ಸಿದ್ಧರಾಮನ ಮನೋಭಾವನೆಯು ಪ್ರಭು ದೇವರಿಗೂ ಅರಿವಾಯಿತು. ಶಿವಲಿಂಗ ಪ್ರತಿಷ್ಠೆ ಹಾಗೂ ಶಿವಾಲಯಗಳ ನಿರ್ಮಾಣಗಳನ್ನು ಶಿವಾಗಮಗಳು ಒಪ್ಪುತ್ತವೆ. ಎಂಬುದು ಸಿದ್ಧರಾಮನಿಗೆ ಅರಿಯದ ವಿಷಯ ವಾಗಿರಲಿಲ್ಲ. ಪ್ರಭುದೇವರು ಇವನ್ನು ಅಲ್ಲಗಳೆಯುವರಲ್ಲ! ಇದರಲ್ಲಿ ಯಾವದು ನಿಜ. ಯಾವದು ಸುಳ್ಳು, ಎಂಬ ಸಂದೇಹಕ್ಕೊಳಗಾಗುವನು, ಅದನ್ನರಿತ ಪ್ರಭು ದೇವರು—

"ಕೆರೆದೇಗುಲಂಗಳಿಲ್ಲವು ಹಿಂದಣ ಅ ಡಿ ವ ಜ್ಜೆ ಗೊ ಳ ಗು, ಕರ್ಮ ಕಾಂಡ ಯೋಗಂಗಳಿಲ್ಲವು ಭವದತಿಕ್ಕೆಗೆ ಒಳಗು. ಹಿಂದಣ ಮುಂದಣ ಸಂದ ನಳಿದು, ಗುಹೇಶ್ವರ ಲಿಂಗದಲ್ಲಿ ಸಂದಿರಬೇಕು. ಸಿದ್ಧರಾಮಯ್ಯ !"

"ಕರ್ಮವೇ ಪ್ರಾಣವೆಂದು ಮಾಡುವಾಗ ಜ್ಞಾನವನರಿವ ನೆಲೆ ಶುದ್ಧ ಇನ್ನಾವುದು ? ಸಾವನ್ನಕ್ಕ ಸಾಧನೆಯ ಮಾಡಿ, ಕಾದುವ ಠಾವಿನ್ನಾವುದು ? ಅರಿಮುವ ನತಿಗಳೆದು ಮೇಲರಿದುದ ಕರಿಗೊಳ್ಳುತ್ತ ತುಪ್ಪವ ನೀಡಿದ ತಂಡು ಲದಂತೆ ಕಾಯವದೆಲೆ ಶುದ್ಧವಾಗಿರಬೇಕು. ಗುಹೇಶ್ವರ ಲಿಂಗವ ನರಿವುದಕ್ಕೆ ಸಿದ್ಧರಾಮಯ್ಯ !"

"ಚಿನ್ನವ ನೊರೆಯ ಬಹುದಲ್ಲದೆ ಬಣ್ಣವ ನೊರೆಯ ಬಹುದೆ ? ಹೂವ ಮುಡಿಯ ಬಹುದಲ್ಲದೆ ಗಂಧವ ಮುಡಿಯಬಹುದೆ ? ಕ ರ್ಮ ನ ಮಾಡ ಬಹುದಲ್ಲಿದೆ ವಸ್ತುವ ನರಿಯಬಹುದೆ ? ಗುಹೇಶ್ವರನ ನೆನೆಯಬಹುದಲ್ಲದೆ, ಲಿಂಗವು ತಾನಾಗಬಾರದು ಸಿದ್ಧರಾಮಯ್ಯ !"

—ಎಂದರು ಪ್ರಭುದೇವರು, ಅವರಿಗೆ ಸಿದ್ಧರಾಮನ ಯೋಗ್ಯತೆಯ ಬಗೆಗೆ ಸಂಶಯವಿರಲಿಲ್ಲ. ಅವನು ಮಹಾ ಯೋಗಿ ಎಂಬುದು ಅವರಿಗೆ ಗೊತ್ತಿದ್ದಿತು. ಅವನನ್ನು ಒಂದು ಗುರಿಗೆ ತಲುಪಿಸಲೋಸುಗ ಅವನಲ್ಲಿ ಸರ್ವ ಸಮತಾ ಭಾವನೆಯನ್ನು ತುಂಬಬೇಕಾಗಿತ್ತು. ಅಂತೇ ಅವರು—

"ದೇಹ ಭಾವಗಳಿಲ್ಲದೆ ಜೀವಭಾವ ಅಳಿಯದು, ಜೀವಭಾವವಳಿದಲ್ಲದೆ ಭಕ್ತಿಭಾವವಳವಟ್ಟದಲ್ಲದೆ. ಅರಿವು ತಲೆದೋರದು. ಅರಿವು ತಲೆದೋರಿದಲ್ಲದೆ ಕುರುಹು ನಷ್ಟವಾಗದು, ಕುರುಹು ನಷ್ಟವಾದಲ್ಲದೆ, ಮಾಯೆ ಹಿ ಂ ಗ ದು. ಇದು ಕಾರಣ. ಕಾಯದ ಜೀವದ ಹೊಲಿಗೆಯಳಿದ ಭೇದನ ತಿಳಿಯ ಬಲ್ಲರೆ, ಗುಹೇಶ್ವರ ಲಿಂಗದ ಅರಿವು ಸಾಧ್ಯ ವಪ್ಪದು. ಕಾಣಾ ಸಿದ್ಧರಾಮಯ್ಯ !"

"ಕರ್ಪುರದ ಗಿರಿಯ ನುರಿ ಹಿಡಿದ ಬಳಿಕ ಇದ್ದಿಲುಂಟೆ ? ಮ ಂ ಜಿ ನ ಶಿವಾಲಯಕ್ಕೆ ಬಿಸಿಲ ಕಲಶ ಉಂಟೆ ? ಕೆಂಡದ ಗಿರಿಯ ಅರಗಿನ ಬಾ ಣ ದ ಲಚ್ಚಡೆ ಬಳಿಕ ಮರಳಿ ಬಾಣವ ನರಸಲುಂಟೆ ? ಗುಹೇಶ್ವರ ಲಿಂಗವ ನರಿದ ಬಳಿಕ ದೇವರೆಂದು ಅರುಸಲುಂಟೆ ಸಿದ್ಧರಾಮಯ್ಯ ?"

—ಎಂದರು. ಅವರ ಮಾತುಗಳನ್ನು ಕೇಳಿ ಸಿದ್ಧರಾಮನ ಮನ ಉಲ್ಲಸಿತಗೊಂಡಿತು. ತಾನು ಇದುವರೆಗೆ ಸಾಧಕನಾಗಿದ್ದೆನಲ್ಲಿದೆ ಸಿದ್ಧನಾಗಿರಲಿಲ್ಲವೆಂದು ಅವನ ಮನ ಒಪ್ಪಿಕೊಂಡಿತು. ಅವನಂತ ರಂಗವು ಪರಿಶುದ್ಧವಾಯಿತು ಆಗ ಅವನು ಪರಬ್ರಹ್ಮ ಸ್ವರೂಪವಾದ ಲಿಂಗದಲ್ಲಿ ಐಕ್ಯವಾಗುವ ಪರಿಎಂತು? ಎಂದು ಪ್ರಭು ದೇವರನ್ನು ಪ್ರಶ್ನಿಸಿ ಅರಿತುಕೊಳ್ಳಬೇಕೆಂದು—

"ಅಯ್ಯ ! ಕಬ್ಬುನ ನೀರಿನೊಳ ಕಂಡಂತೆ, ಶಬ್ದ ನಿರಾಳವನೊಳಕೊಂಡಂತೆ, ಮರೀಚಿಯು ಬಯಲನೊಳಕೊಂಡಂತೆ ಎನ್ನನೆಂದೊಳಕೊಂಬೆ, ಹೇಳಾ ಕಪಿಲ ಸಿದ್ಧಮಲ್ಲಿಕಾರ್ಜುನಾ !"

—ಎಂದು ಬೇಡಿಕೊಂಡನು. ಆಗ ಪ್ರಭು ದೇವರು—

"ತೆರಹಿಲ್ಲದ ಘನವ ಮನ ಒಳಕೊಂಡು ತನಗೆ ತಾ ತರಹರವಾದ ಬಳಿಕ, ಮರಳಿ ಇನ್ನು ಇಂಬುಗೊಡಲುಂಟೆ ? ಗುಹೇಶ್ವರನ ಲೀಲೆ ಮಾಬನ್ನಕ್ಕರ ಉರಿಯೊಳಗಣ ಕರ್ಪುರದಂತೆ ಇರಬೇಕು ಕಾಣಾ ಸಿದ್ಧರಾಮಯ್ಯಾ !"

ಎಂದು ಉತ್ತರಿಸಿದರು. ಸಿದ್ಧರಾಮನ ಹೃದಯದಲ್ಲಿ ಭವತಿ ಮಿರವನ್ನು ಪರಿಹರಿಸುವಂಥ ದಿವ್ಯಜ್ಞಾನವು ಬೆಳಗಿತು. ಆಗ ಅವನ ಮನದಲ್ಲಿ ಪ್ರಭು ದೇವರ ರಸ್ಥಲದ ಲಿಂಗ ಮೂರ್ತಿಯು ಬಂದ ಪರಿಯನ್ನು ಅರಿಯುವ ಇಚ್ಛೆ ಮೂಡಿ—

"ಕೆರೆತೊರೆ ದೇಗುಲದ ಕಡೆಯಿಂದ ನಿಮ್ಮ ಕಂಡೆ, ಎಡಹುವ ಕಲ್ಲಿ ತೆಗೆವ ಮರೆಯಲ್ಲಿ ನಿಧಾನವ ಕಂಡಂತೆ ಎನ್ನ ಮರೆವೆಯ ತಮಧೆ ಅದ್ರಿಗೆ ದಿನಮಣಿ ಜನಿಸಿದಂತೆ ಕಪಿಲ ಸಿದ್ಧಮಲ್ಲಿಕಾರ್ಜುನ ಲಿಂಗವೆಂಬ ಬ್ರಾಂತು ಸ್ವಯವಾಯಿತ್ತು. ಪ್ರಭು ದೇವರು ಕಾರುಣ್ಯದಿಂದೆ

"ಅಯ್ಯ ನಿಮ್ಮ ಸರಉಂಡ ಸಬುದವೆನ್ನ ಮನಕ್ಕೆ ವೇದ್ಯವಾಯಿತ್ತು. ನಿಮ್ಮ ನಿಜಉಂಡ ನಿಲವು ಎನ್ನ ಮತಿಗೆ ವೇದ್ಯವಾಯಿತ್ತು. ನಿಮ್ಮ ಕರುಣ ಪ್ರಸಾದವೆನ್ನ ಸರ್ವಾಂಗಕ್ಕೆ ವೇದ್ಯವಾಯಿತ್ತು. ನಿಮ್ಮ ಕಾಯವಿಡಿದಿಪ್ಪ ಕರಸ್ಥಲದ ಕಾರಣವ ಹೇಳಾ. ಕಪಿಲ ಸಿದ್ಧಮಲ್ಲಿನಾಥಾ !"

ಎಂದು ಕೇಳಿಕೊಂಡನು. ಆಗ ಪ್ರಭು ದೇವರು—

"ಅನಾದಿಗಣನಾಥನ ಶಿಷ್ಯನು. ಆದಿಗಣನಾಥನು, ಆದಿಗಣನಾಥನ ಶಿಷ್ಯನು ಅಧ್ಯಾತ್ಮಗಣನಾಥನು, ಅಧ್ಯಾತ್ಮಗಣನಾಥನ ಶಿಷ್ಯನು ಆತ್ಮಗಣನಾಥನು ಆತ್ಮಗಣನಾಥನ ಶಿಷ್ಯನು. ವ್ಯೋಮ ಸಿದ್ಧಗಣನಾಥನು, ವ್ಯೋಮ ಸಿದ್ಧಗಣನಾಥನ ಶಿಷ್ಯನು ಬಸವನೆಂಬ ಗಣನಾಥನು. ಅನುಮಿಷ್ಯನೆಂಬ ಗಣನಾಥನ ಶಿಷ್ಯನು. ಅಲ್ಲಮ ಪ್ರಭುವೆಂಬ ಗಣನಾಥನು ಇಂತು ಅನಾದಿವಿಡಿದು ಬಂದ ಅನುಪಮ ಲಿಂಗವು, ಗುಹೇಶ್ವರನೆಂಬ ಹೆಸರನೊಳಗೊಂಡು ಎನ್ನ ಕರಸ್ಥಲಕ್ಕೆ ಸಾಧ್ಯವಾಯಿತ್ತು. ಕಾಣಾ ಸಿದ್ಧರಾಮಯ್ಯ !"

—ಎಂದು ಉತ್ತರಿಸಿದರು. ಆಗ ಸಿದ್ಧರಾಮನು.

"ಕಾಯಕವೇ ಪೀಠಿಕೆ, ಪ್ರಾಣವೇ ಲಿಂಗವಾಗಿರಲು, ಬೇರೆ ಮತ್ತೆ ಕುರುಹೇಕಯ್ಯಾ ? ಕುರುಹು ವಿಡಿದು ಕೂಡುವ ನಿರವಯ ಉಂಟೆ ? ಜಗದೊಳಗೆ ನಷ್ಟವ ಕೈಯಲ್ಲಿ ಹಿಡಿದು ದೃಷ್ಟವ ಕಂಡಿಹೆನೆಂದರೆ ಕಪಿಲ ಸಿದ್ಧಮಲ್ಲಿನಾಥಯ್ಯನು ಸಾಧ್ಯವಹ ಪರಿಯ ಹೇಳಾ ಪ್ರಭುವೇ"

ಎಂದೆನ್ನಲು ಪ್ರಭು ದೇವರು—

"ಇಷ್ಟ ಲಿಂಗದ, ಪ್ರಾಣ ಲಿಂಗದ ಭೇದವನಾರು ಬಲ್ಲರು ಹೇಳಾ ? ಅಂತರಂಗವೆಂಬ ಶಬ್ದಕ್ಕೆ ಬಹಿರಂಗ ಮುಂದುಗೊಂಡಿಪ್ಪದು. ಮನವ ನಡೆಗೊಂಬ ಲಿಂಗವು ವಿಚಾರ ವ್ಯಾಕುಳಕ್ಕೆ ಒಳಗಾಗಬಾರದೆಂದು, ಮನಭಾವ, ಜ್ಞಾನ, ನೋಟವ ತಂದು ಕರಸ್ಥಲದಲ್ಲಿ ನಿಕ್ಷೇಪಿಸಿ, ಅಂತರಂಗ, ಬಹಿರಂಗವೆಂಬುದ ನರಿಯದೆ, ಅನುಮಿಷನಾಗಿಪ್ಪ ನಾ, ಪ್ರಾಣ ಲಿಂಗದ ಪ್ರಸನ್ನ ಮುಖವ ನೋಡಿ ಪರಿಣಾಮಿಸಲೋಸುಗ ಕಂತೇಜವೆಂಬ ದರ್ಪಣವ ಹಿಡಿದು ಇರ್ಪನು ನೋಡಾ. ಗುಹೇಶ್ವರ ಲಿಂಗದಲ್ಲಿ ನಿರ್ಜಿವ ನೈದಿಹನೆಂದರೆ ಕುರುಹು ವಿಡಿದು ಕುರುಹು ಗೆಡಬೇಕು. ಸಿದ್ಧರಾಮಯ್ಯ"

ಎಂದರು. ಆಗ ಸಿದ್ಧರಾಮನು—

"ಅಯ್ಯ ನಿಮ್ಮ ಕರಸ್ಥಲದ ಘನಲಿಂಗವನು ಪಮಿಸಿ ಬಲ್ಲವರಿಲ್ಲವಯ್ಯ ನಿಮ್ಮ ಮಹಿಮೆಯ ನಿರಿವರೆ ನಾನೇತರೊಳಗೇನಯ್ಯಾ ! ಆ ಇಷ್ಟ ಲಿಂಗದೊಳಗೆ ಮುಟ್ಟಿದ ಶರಣನೊಳಗೆ ಮುಟ್ಟಿದ ಕರಸ್ಥಲ ಎಷ್ಟೆಂಬುದ ತಿಳುಹಿ ಎನ್ನ ನುಳುಹಿಕೊಳ್ಳಾ ಕಪಿಲ ಸಿದ್ಧಮಲ್ಲಿಕಾರ್ಜುನಾ !"

ಎಂದು ಬೇಡಿಕೊಳ್ಳಲು ಪ್ರಭು ದೇವರು—

“ಆಯತ ಲಿಂಗವಿಡಿದು ಸ್ವಾಯತ ಲಿಂಗವ ಕಾಣಬೇಕು. ಸಿದ್ಧರಾಮಯ್ಯ. ಸ್ವಾಯತ ಲಿಂಗವಿಡಿದು ಜಂಗಮ ಲಿಂಗವ ಕಾಣಬೇಕು. ಸಿದ್ಧರಾಮಯ್ಯ. ಗುರುಲಿಂಗವಿಡಿದು ಶಿವಲಿಂಗ ಕಾಣಬೇಕು. ಸಿದ್ಧರಾಮಯ್ಯ, ಶಿವಲಿಂಗವಿಡಿದು ಪ್ರಸಾದ ಲಿಂಗವ ಕಾಣಬೇಕು. ಸಿದ್ಧರಾಮಯ್ಯ, ಇಂತು ಷಟ್‌ಸ್ಥಲದಂತುವ ಸಂಧಿಸಿ ಬಂದು ಮಾಡಿಕೊಂಡಿಪ್ಪ ಕರಸ್ಥಲದನುವನು ಗುಹೇಶ್ವರನ ಶರಣ ಸಂಗನ ಬಸವಣ್ಣ ಬಲ್ಲ ಬೆಸಗೊಂಬಬಾರಾ ಸಿದ್ಧರಾಮಯ್ಯ ಎಂದರು. ಆದಕ್ಕೆ ಸಿದ್ದರಾಮನು—

“ಅಯ್ಯ ಕರಸ್ಥಲವ ಘನ ನಿಮ್ಮಲ್ಲಿರಲಿ, ಅಯ್ಯ ನಿಮ್ಮ ಪರಸ್ಥಲವ ಘನವ ನಿಮ್ಮಲ್ಲಿರಲಿ, ಕರಸ್ಥಲವನೊಲ್ಲೆ ಪರಸ್ಥಲವನೊಲ್ಲೆ ಆವುವನು ಒಲ್ಲೆ. ನೋಡಯ್ಯ. ಕಪಿಲ ಸಿದ್ಧಮಲ್ಲಿನಾಥಯ್ಯ, ನೀ ಒಲಿದು ಸಂಗನ ಬಸವಣ್ಣನ ಶ್ರೀ ಪಾದವ ತೋರಿಹೆನೆಂಬ ಮಾತಿಂಗೆ ಮಾರುವೋದೆನು ಇನ್ನು ತೋರಿ ಎನ್ನ ನುಳುಹಿಕೊಳ್ಳಾ ಎನ್ನ ದೇವರ ದೇವಾ ! ಎಂದು ಕೇಳಿಕೊಳ್ಳಲು ಪ್ರಭು ದೇವರು—

“ಅಂಗದಲ್ಲಿ ಆಚಾರವ ಸ್ವಾಯತವ ಮಾಡಿಕೊಂಡನು, ಆಚಾರದಲ್ಲಿ ಪ್ರಾಣವ ಸ್ವಾಯತವ ಮಾಡಿಕೊಂಡನು, ಪ್ರಾಣದಲ್ಲಿ ಲಿಂಗವ ಸ್ವಾಯತವ, ಮಾಡಿಕೊಂಡನು. ಲಿಂಗದಲ್ಲಿ ಜಂಗಮವ ಸ್ವಾಯತವ ಮಾಡಿಕೊಂಡನು, ನಿತ್ಯದಲ್ಲಿ ದಾಸೋಹವ ಸ್ವಾಯತವ ಮಾಡಿಕೊಂಡನು. ದಾಸೋಹದಲ್ಲಿ ತನ ಮರೆದು ನಿಶ್ಚಿಂತ ನಿವಾಸಿಯಾಗಿ ಇದಾನೆ ನಮ್ಮ ಗುಹೇಶ್ವರ ಲಿಂಗದಲ್ಲಿ ಸಂಗನ ಬಸವಣ್ಣನ ಶ್ರೀ ಪಾದಕ್ಕೆ ಶರಣೆಂದು ಧನ್ಯರಾಗಬೇಕು. ನಡೆಸಿದ್ಧ ರಾಮಯ್ಯ :”

ಎಂದು ಸಿದ್ಧರಾಮನನ್ನು ಕಲ್ಯಾಣಕ್ಕೆ ಕರೆದರು. ಆಗ ಸಿದ್ಧರಾಮನು ಹೂವಿನ ಹಾಳಕಲ್ಲಯ್ಯನನ್ನು ಕರೆದು ತಾನು ಕಲ್ಯಾಣಕ್ಕೆ ಹೋಗಿ ಬರುವದಾಗಿಯೂ ಆಪರಿಯಂತರ ಇಲ್ಲಿಯದನ್ನೆಲ್ಲ ನೀನೇ ನೋಡಿಕೊಳ್ಳಬೇಕೆಂತಲೂ ಹೇಳಿ ಪ್ರಭು ದೇವರೊಡನೆ ಕಲ್ಯಾಣಕ್ಕೆ ಹೊರಟನು.

## —: ಕಲ್ಯಾಣಪುರದ ಮಹಾತ್ಮೆ :--

ಸ್ವಸ್ತಿ, ಸಮಸ್ತ, ಪ್ರಶಸ್ತ, ಸಹಿತ ಶ್ರೀ ಮತ್ಕಲ್ಯಾಣಪುರದ ಮಹಾತ್ಮೆ ಎಂತೆಂದೊಡೆ ವಿಸ್ತರಿಸಿ ಪೇಳುವೆನು. ಎಲ್ಲ ಶಿವಗಣಂಗಳು ಕೇಳಿ, ಕೃತಾರ್ಥ ರಾಗಿರಯ್ಯಾ, ಹದಿನಾಲ್ಕು ಭುವನಕ್ಕೆ ಕಲಶವೆಂದೆಸುವ ರು ದ್ರ ಲೋ ಕ ವ ಮೃತ್ಯುಲೋಕಕ್ಕೆ ತಂದು, ಕಲ್ಯಾಣಪುರವಾಗಿ ಹುಟ್ಟಿತ್ತು. ನೋಡಿರಯ್ಯ ! ಅಲ್ಲಿ ಸತ್ಯರು, ಸಾತ್ವಿಕರು, ನಿತ್ಯರು, ನಿಜೈಕ್ಯರು, ಮಹಾಜ್ಞಾನಿಗಳು ಪರವ ಶಿವಯೋಗಿಗಳು ಶಿವಾನುಭಾವ ಸಂಪನ್ನರು, ಶಿವಲಿಂಗ ಪ್ರಾಣಿಗಳು, ಶಿವ ಪ್ರಸಾದ ಪಾದೋದಕ ಸಂಬಂಧಿಗಳು, ಶಿವಾಚಾರ ವೇದ್ಯರು, ಶಿವಾಗಮ ಸಾಧ್ಯರು, ಶಿವಸಮಯ ಪಕ್ಷರುಗಳಿಲ್ಲದೆ ಮತ್ತಾರು, ಅಲ್ಲಲ್ಲಿ ನೋಡಿರಯ್ಯ.

ಪಾಪಿಗಳು, ಕೋಪಿಗಳು, ಅಸತ್ಯರು, ಅನಾಚಾರಿಗಳು ಹೋಗಬಾರದು ಕಲ್ಯಾಣವ, ಮೀರಿ ಹೊಕ್ಕಿಹೆನೆಂಬವರಿಗೆ ಬಾಳಬಾಯಿಧಾರೆ ನೋಡಯ್ಯ, ಆ ಮಹಾ ಕಲ್ಯಾಣವ ವಿಸ್ತಾರ ತಾನೆಂತೆಂದೊಡೆ ಹನ್ನೆರಡು ಯೋಜನಗರಿ, ಪ್ರಯಾಣದ ವಿಸ್ತೀರ್ಣ ಪಟ್ಟಣಕ್ಕೆ ಮೂನ್ನೂರರುವತ್ತು ಬಾಗಿಲವಾಡ, ಆ ಬಾಗಿಲಿಗೆ ನೂರಾಐವತ್ತೈದು ವಜ್ರ ಹಾರೆಯ ಕದಂಗಳು ಇನ್ನೂರಿಪ್ಪತ್ತೈದ್ವ ಕಲುಗೆಲಸದ ದ್ವಾರಪಟ್ಟಣಕ್ಕೆ ನಾನೂರು ಐವತ್ತು ಸುವರ್ಣದ ಕೆ ಲ ಸ ದ ಕದಂಗಳು ಅಲ್ಲಿ ನೂರಾಹದಿನೈದು ವೊಳೆಯ ಕದಂಗಳು ಇಪ್ಪತ್ತು ಬಾಗಿಲು ಆವಾರಿಯಾಗಿಪ್ಪವಾಗಿ ಅವಕ್ಕೆ ಕದಂಗಳಿಲ್ಲ.

ಆ ಪಟ್ಟಣಕ್ಕೆ ಒಳಸಿಬಂದ ಕೋಟೆ ನಲವತ್ತೆಂಟು ಯೋಜನ ಪರಿ, ಪ್ರಮಾಣ ಬಾಹತ್ತರ ಮನ ಲಕ್ಷ, ಮಾಂಡಲಿಕರ ಮನೆ ಲಕ್ಷ, ಸಾವಂತರ ಮನೆ ಲಕ್ಷ, ರಾಯರಾವುತರ ಮನೆಯೊಳಡಗಿಹೆ ಮನೆಗಳಿಗೆ ಲೆ ಕ್ಕ ವಿ ಲ್ಲ, ದ್ವಾದಶ ಯೋಜನ ವಿಸ್ತೀರ್ಣ, ಸೂರ್ಯವೀದಿ, ನೂರಿಪ್ಪತ್ತು, ದ್ವಾದಶ ಯೋಜನ ಸೋಮವೀಧಿ ನೂರಿಪ್ಪತ್ತೈದು, ಅದಕ್ಕಿಮ್ಮಿಗಿಲಾದ ಒ ಳ ಕೇ ರಿ ಹೊರಕೇರಿ ಗಣನೆಯಿಲ್ಲ. ಆ ಪಟ್ಟಣದೊಳಗೆ ಲಕ್ಷದ ಮೇಲೆ ತೊಂಭತ್ತಾರು ಸಾವಿರ ಶಿವಾಲಯ, ಆ ಶಿವಾಲಯಗಳಿಗೆ ಮುಖ್ಯವಾದ ತ್ರಿ ಪುರಾಂತಕ ದೇವರ ಶಿವಾಲಯ ಮುನ್ನೂರರುವತ್ತು ಪದ್ಮ ಪತ್ರ ತೀವಿದ ಸರೋವರಂಗಳು

ಎರಡು ಲಕ್ಷವು, ಎಂಭತ್ತೈದು ಸಾವಿರದ ಏಳನೂರೆಪತ್ತು ದಾಸೋಹದ ಮಠಗಳು.

ಆದಾಸೋಹದ ಮಠಂಗಳಿಗೆ ಮುಖ್ಯವಾದ ಬಸವರಾಜ ದೇವರ ಮಠದ ವಿಸ್ತೀರ್ಣ ಎಂತೆಂದೊಡೆ; ಯೋಚಿಸಿ ವರೆಯ ಬಿನ್ನಾಣದ ಕಲುಗೆಲ ಸವ ಪೌಳಿ; ಅತಿ-ಸೂಕ್ಷ್ಮದ ಕಸುರಿಗೆಲಸದ ದ್ವಾರಪಟ್ಟವೈದು ಪಂಚಾಕ್ಷರದ ಶಾಸನ ಮಿಸುನಿಯ ಕಂಬದ ತೋರಣಂಗಳಲ್ಲಿ ರುದ್ರಾಕ್ಷಿಯ ಸೂಸಕ, ಆ ಬಾಗಿಲುವಾಡದಲ್ಲಿ ಒಪ್ಪುತಿಪ್ಪವಯ್ಯ ನಂದಿಯ ಕಂಬದ ಸುವರ್ಣದುಪ್ಪಂಗೆ ಧ್ವಜ, ಉಪ್ಪರ ಗುಡಿ ಪತಾಕೆ ವ್ಯಾಸನ ಧ್ವಜ ಒಪ್ಪುತಿಪ್ಪವಯ್ಯ. ಅದರ ಮಧ್ಯದಲ್ಲಿ ಬಸವರಾಜ ದೇವರ ಸಿಂಹಾಸನದ ವಿಸ್ತೀರ್ಣದ ಪ್ರಮಾಣ, ಸಹಸ್ರ ಕಂಬದ ಸುವರ್ಣದುಪ್ಪರಿಗೆ, ಆ ಮನೆಗೆತ್ತಿದ ಹೊನ್ನ ಕಲಶ ಸಾವಿರ ಗುರುಲಿಂಗ ಜಂಗಮಕ್ಕೆ ಪಾದಾರ್ಚನೆಯ ಮಾಡುವ ಹೊಕ್ಕರಣೆ, ನಾಲ್ಕು ವರುಷ ಪ್ರಮಾಣದ ಘಾತ ಅಲ್ಲಿ ತುಂಬಿದ ಪಾದೋದಕವ ತುಂಬಿ ನುಚ್ಚಲು ಬೆಳೆವ ರಾಜ ಸಾಲೆಯ ಗದ್ದೆ ಹನ್ನೆರಡು ಖಂಡಗ, ಆಯೋಜನ ವರೆಯ ಬಿನ್ನಾಣದ ಅರಮನೆಯ ವಿಸ್ತೀರ್ಣದೊಳಗೆ ಲಿಂಗಾರ್ಚನೆಯ ಮಾಡುವ ಮಠದ ಕಟ್ಟಳೆ ಲಕ್ಷದ ಮೇಲೆ ತೊಂಭತ್ತಾರು ಸಾವಿರ, ಇಂತಿ ಬಸವರಾಜ ದೇವರು ಮುಖ್ಯವಾದ ಅಸಂಖ್ಯಾತರ ಮಠಗಳು ಆ ಕಲ್ಯಾಣದೊಳಗೆ ಎಷ್ಟು ಎಂದರೆ—

ಹನ್ನೆರಡು ಸಾವಿರ ಕಟ್ಟಾಳೆಯ ನೇಮದ ಭಕ್ತರ ಮಠಂಗಳು, ಇ (ಎ ?) ಪ್ಪತ್ತೆಂಟು ಸಾವಿರ ಮಹಾಮನೆಗಳು, ಆ ಕಲ್ಯಾಣದೊಳಗೆ ಹತ್ತು ಸಾವಿರ ನಿತ್ಯ ನೇಮಿಗಳ ಮಠಂಗಳು, ಹದಿನೈದು ಸಾವಿರ ಚಿಲುಮೆಯ ಅಗ್ಗ ವಣಿಯ ವ್ರತಸ್ಥರ ಮಠಂಗಳು, ಐದುಸಾವಿರ ವ್ರತ ನೇಮಿಗಳ ಕಟ್ಟಳೆಯ ಮಠಂಗಳು, ಹನ್ನೆರಡು ಸಾವಿರ ಅಚ್ಚ ಪ್ರಸಾದಿಗಳ ಮಠಂಗಳು, ಒಂದು ಸಾವಿರ ಅರವತ್ತುನಾಲ್ಕು ಶೀಲಸಂಪನ್ನರ ಮಠಂಗಳು, ಒಂದು ಸಾವಿರ ಜಂಗಮಕ್ಕೆ ಆರೋಗಣೆಯ ಮಾಡಿಸುವ ದಾಸೋಹಿಗಳ ಮಠಂಗಳು, ಮುವ ತ್ತೆರಡು ಸಾವಿರ, ನಿತ್ಯ ಐನೂರು ಜಂಗಮಕ್ಕೆ ಒಂದು ದಾಸೋಹವ ಮಾಡು ವ ಸದಾಚಾರಿಗಳ ಮಠಂಗಳು, ಐವತ್ತೆಂಟು ಸಾವಿರ, ನಿತ್ಯ ಸಾವಿರದ ನೂರು

ಜಂಗಮಕ್ಕೆ ಒಂದು ದಾಸೋಹವ ಮಾಡುವ ದಾಸೋಹಿಗಳ ಮಠಂಗಳು, ಹನ್ನೊಂದು ಸಾವಿರ, ನಿತ್ಯ ಅವಾರಿಯಿಂದ ಮಾಡುವ ಮಾಟ ಕೂಟದ ಸದ್ಭಕ್ತರ ಮಠಂಗಳು ಒಂದು ಲಕ್ಷ, ಜಂಗಮ ಸಹಿತ ಸಮಯಾಚಾರದಿಂದ ಲಿಂಗಾರ್ಚನೆಯ ಮಾಡುವ ಜಂಗಮ ಭಕ್ತರಮಠ ಎರಡು ಸಾವಿರ ಏಳನೂರೆಪ್ಪತ್ತು.

ಅಂತು ಎರಡು ಲಕ್ಷವು ಎಂಭತ್ತೈದು ಸಾವಿರದ ಏಳನೂರೆಪ್ಪತು ಅಸಂಖ್ಯಾತರಿಗೆ ಮುಖ್ಯವಾಗಿ ರುದ್ರಲೋಕದಿಂದಿಳಿತಂದ ಪ್ರಮಥಗಣಂಗಳ ಮಠಂಗಳು ಏಳನೂರೆಪ್ಪತ್ತು. ಇಂತೀ ಮಹಾ ಪ್ರಮಥರಿಗೆ, ಪುರಾತರಿಗೆ, ಅಸಂಖ್ಯಾತ ಮಹಾ ಗಣಂಗಳಿಗೆ ಪ್ರಮಥ ನಾಯಕನಾಗಿ ಏಕ ಮುಖ, ದಶಮುಖ, ಶತಮುಖ, ಸಹಸ್ರಮುಖ, ಲಕ್ಷಮುಖ, ಕೋಟಿಮುಖ, ಅನಂತ ಕೋಟಿ, ಮುಖನಾಗಿ, ಭಕ್ತರಿಗೆ ಒಡನಾಡಿಯಾಗಿಪ್ಪನು ಸಂಗನ ಬಸವಂಣನು, ಜಗದಾಂಧ್ಯ ಬಸವಣ್ಣನು, ಶರಣ ಸನ್ನಿಹಿತ ಬಿಸವಂಣ, ಸರ್ವಚಾರ ಸಂಪನ್ನ ಬಸವಂಣ, ಸರ್ವಾಂಗ ಲಿಂಗಿಸಂಪನ್ನ ಬಸವಂಣ, ಸತ್ಯ ಸಾತ್ವಿಕ ಬಸವಂಣ, ನಿತ್ಯ ನಿಜೈಕ್ಯ ಬಸವಂಣ, ಷಡುಸ್ಥಲ ಸಂಪನ್ನ ಬ ಸ ವ ಂ ಣ, ಸುಜ್ಞಾನ ಭರಿತ ಬಸವಂಣ, ನಿತ್ಯ ಪ್ರಸಾದಿ ಬಸವಂಣ, ಸಚ್ಚಿದಾನಂದ ಮೂರ್ತಿ ಬಸವಂಣ, ಸದ್ಯೋನ್ಮುಕ್ತಿರೂಪ, ಬಸವಣ್ಣ, ಅಖಂಡ ಪರಿಪೂರ್ಣ ಬಸವಂಣ, ಅಕಾಯ ಚರಿತ್ರ ಬಸವಂಣ, ಅಸಾಧ್ಯ ಸಾಧಕ ಬಸವಂಣ, ಅಭೇದ್ಯ ಭೇದಕ ಬಸವಂಣ, ಅನುಮಯ ಮೂರ್ತಿ ಬಸವಂಣ, ಮಹಾಮನೆಯ ಮಾಡಿದಾತ ಬಸವಂಣ, ರುದ್ರಲೋಕವ ಮರ್ತ್ಯಲೋಕಕ್ಕೆ ತಂದಾತ ಬಸವಂಣ, ಶಿವಾಚಾರದ ಘನವ ಮೆರೆದಾತ ಬಸವಂಣ,

ಇಂತಹ ಬಸವಂಣನ ಭಕ್ತಿಯನು ಬರೆದೊರೆದು ನೋಡಿ ಪ್ರಬಲತವ ಮಾಡುವ, ಅಶ್ವಪತಿ ಜಗಪತಿ, ನರಪತಿ—ರಾಯ, ರಾಜಾಧಿ ರಾಜ ಬಿಜ್ಜಳ ರಾಯನು, ಆ ಬಸವಣ್ಣನು ಆ ಕಲ್ಯಾಣ ಪಟ್ಟಣದೊಳಗೆ ಸುಖ ಸಂಕಥಾ ವಿನೋದದಿಂದ ರಾಜ್ಯಂಗೈವುತ್ತಿರಲು, ಆ ಕಲ್ಯಾಣದ ನಾಮವ ಪಿಡಿದ್ದು ವಿವಾಹಕ್ಕೆ ಕಲ್ಯಾಣವೆಂಬ ನಾಮವಾಯಿತ್ತು. ಲೋಕದೊಳಗೆ ಕಲ್ಯಾಣವೇ ಕೈಲಾಸವೆನಿಸಿತ್ತು. ಇಂತಪ್ಪ ಕಲ್ಯಾಣದ ದುರುಶನ ಮಾ ಡಿ ದ ಕಿ

ಭವಂ ನಾಸ್ತಿ, ಇಂತಪ್ಪ ಕಲ್ಯಾಣವ ನೆನೆವರೆ ಪಾಪಕ್ಷಯ, ಇಂತಪ್ಪ, ಕಲ್ಯಾಣದ ಮಹತ್ವವ ಕೇಳಿದರೆ ಕರ್ಮಕ್ಷಯವಹುದು. ಮೋಕ್ಷ ಸಾಧ್ಯವಹುದು ಇದು ಕಾರಣ ಕೂಡಲ ಚನ್ನ ಸಂಗಮದೇವ ನಿಮ್ಮ ಭಕ್ತ ಬಸವಂಣನಿಪ್ಪ ತಾವೇ ಮಹಾ ಕಲ್ಯಾಣವೆಂದರಿದು, ದಿವ್ಯಶಾಸನವ ಬರೆದು ಪಠಿಸಿದ ಕಾರಣ ಎನ್ನಭವಂ **ನಾಸ್ತಿ**ಯಾಯಿತ್ತಯ್ಯ.

**ಕಲ್ಯಾಣ**ವನ್ನು ತಲುಪಿದ ನಂತರ ಪ್ರಭು ದೇವರು ಬಸವಂಣನವರ ಮಹಿಮೆಯನ್ನು ಕುರಿತು.

"ಕಲ್ಯಾಣವೆಂಬ ಪ್ರಣತೆಯಲ್ಲಿ ಭಕ್ತಿರಸವೆಂಬ ತೈಲವನೆರೆದು ಆಚಾರವೆಂಬ ಬತ್ತಿಯಲ್ಲಿ ಬಸವಣ್ಣನೆಂಬ ಜ್ಯೋತಿಯ ಮುಟ್ಟಿಸಲು ತೊಳಗಿ ಬಳಗುತ್ತಿರ್ದಿತ್ತಯ್ಯ ಶಿವನ ಪ್ರತಾಪ ಆ ಬೆಳಗಿನೊಳು ಒಪ್ಪುತ್ತಿರ್ದ ಕ್ಷೇತ್ರ ಅವಿಮುಕ್ತ ಕ್ಷೇತ್ರವೆಂಬುದು ಹುಸಿಯೆ? ಶಿವ ಭಕ್ತರಿರ್ದದೇಶ ಪಾವನವೆಂಬುದು ಹುಸಿಯೇ? ಗುಹೇಶ್ವರ ಲಿಂಗದಲ್ಲಿ ಎನ್ನ ಪರಮಾರಾಧ್ಯರು ಸಂಗನ ಬಸವಂಣನ ಮಹಿಮೆಯ ನೋಡಾ ಸಿದ್ಧರಾಮಯ್ಯ!"

ಎಂದು ತಿಳಿಪಡಿಸಿ, ಬಸವಂಣನವರ ಮನೆಗೆ ಕರೆದೊಯ್ದು ಮಾಚಿದೇವ, ಬ್ರಹ್ಮಯ್ಯ ಚನ್ನಬಸವಂಣ್ಣ, ಹಾಗು ಬಸವಂಣನವರ ದರ್ಶನ ಮಾಡಿಸಿದರು, ಅನಂತರ ಚನ್ನಬಸವಂಣನು ಬಸವಂಣನವರ ಅಂಗದ ಮೇಲೆ ಲಿಂಗವುಳ್ಳವರೆಲ್ಲ ಸಂಗಮನಾಥರು ಎಂಬ ಅಭಿಪ್ರಾಯದಂತೆ—

ನವರತ್ನಮಯವಾದ ತನ್ಮಹಾಮಂಟಪ
ನವದುಕೂಲಂಗಳಿಂ ನವಕುಸುಮಮಾಲೆಯಿಂ
ತವೆಝುಲ್ಲಿ ಪಟ್ಟಿಗಳ ಮುತ್ತುಗಳ ಪೊಸಫಲಿದ ಗೊಂಚಲ್ಗಳಿಂ ವಿರಚಿಸಿ
ಅವಿರಳದ, ಕತ್ತುರಿಯ ಸಾರಣೆಯ ಕಣ್ಗೊಳಿಪ
ವಿವಿಧ ಮುತ್ತಿನ ರಂಗವಲಿಯಿಂದ ಲಂತಿಂತು;
ಹವಣಿಸಿದ ಸುಸ್ಥಳದೊಳಂದಿರದೆ ತಂಡುಲದ ಚೌರಮ ಕೈಯ್ಗೆಯ್ದರು

ಅನಂತರ ಎಲ್ಲ ಕಾರ್ಯಗಳನ್ನು ಚನ್ನಬಸವಂಣನು ನಡೆಸಿದ—

"ತ್ರಿವಿಧ ದೀಕ್ಷೆಗಳಿಂದೆ ತ್ರಿವಿಧ ಲಿಂಗಗಳು, ತ್ರಿವಿಧಾಂಗದೊಳ್ ದೀಕ್ಷೆಯಂಮಾಡಿ ತ್ರಿವಿಧ ಮಲವಮಂ ಬಿಡದೆ ಛೆದಿಸಲ್ಕೆ" ಸಿದ್ಧರಾಮನ ಗುರು ಮುಖ್ಯರಾದಿಯಾಗಿ ಎಲ್ಲ ಗಣನಿವಹಕ್ಕೆ ಸ್ವಾಷ್ಟಾಂಗವೆರಗಿ ಕುಳಿತುಕೊಳ್ಳಲು

ಕನ್ನೆಯರು ಶತಸಹಂ ನಾಗಾಯಿ ಗಂಗಾಂಬೆ,
ಮನ್ನಣೆಯ ನೀಲಲೋಚನೆಯು ನವರತ್ನ ದಾರತಿ ಎತ್ತುತಿರೆ.

ಸಿದ್ಧರಾಮನು ವೀರಶೈವನಾದನು. "ಗುರುವಿನ ಕೈಯಾಲಿ ನಾನ್ಸತ್ತು ಹುಟ್ಟಿದ ಬಳಿಕ, ಆನು ನೀನೆಂಬ ಸಂದಿಳಿದೆ" ಎಂದು ಗುರುವಿಗೆ ವಂದಿಸಿದನು. ಪ್ರಭು ದೇವರಿಗೆ ಅತೀವ ಆನಂದವಾಯಿತು.

ಈ ರೀತಿಯಾಗಿ ವೀರಶೈವ ದೀಕ್ಷೆಯನ್ನು ಪಡೆದನಂತರ ಸಿದ್ಧರಾಮನು ನಿಜಕ್ಕೂ 'ಸಿದ್ಧ' ರಾಮನೇ ಆದನು. ಹರಳಯ್ಯ—ಮಧುವಯ್ಯಗಳ ಪ್ರಕರಣದನಂತರ ಕಲ್ಯಾಣದಲ್ಲಿ ನಡೆದ ರಕ್ತ ಕ್ರಾಂತಿಯ ಪರಿಣಾಮವಾಗಿ ಆಗ ಶೂನ್ಯ ಸಿಂಹಾಸನವನ್ನಲಂಕರಿಸಿದ್ದ ಚನ್ನಬಸವಣ್ಣನು ಆ ಪೀಠವನ್ನು ಸಿದ್ಧರಾಮನಿಗೆ ಒಪ್ಪಿಸಿ ಉಳವಿಗೆ ಹೋಗಿ ಲಿಂಗೈಕ್ಯನಾದನು.

ಆನಂತರ ಕೆಲಕಾಲ ಗತಿಸಲು ಸಿದ್ಧರಾಮನೂ ಸೊನ್ನಲಿಗೆಯ ತಟಾಕದಲ್ಲಿ ಬಯಲಾದನು.

## : ಸಿದ್ಧರಾಮೇಶ್ವರ ವಚನಗಳು :

—೧—

ಎನ್ನನಾಗಳಿ ಬಂದಿವಿಡಿದೆ ಗಡಾ ನೀನು
ನಿಮ್ಮ ಹಿಡಿವರೇ ಹಿಡಿವರು ? ತನುವಿರೆ ಬೇರಾದವರು ?
ನಿಮ್ಮ ಹಿಡಿವರೇ ಹಿಡಿವರು ? ಮನವಿರೆ ಮನಬೇರಾದವರು ?
ನಿಮ್ಮ ಹಿಡಿವರೇ ಹಿಡಿವರು ? ಕೈಯಿದೆ ಕೈಬೇರಾದವರು ?
ನಿಮ್ಮ ಹಿಡಿವರೇ ಹಿಡಿವರು ? ಕಣ್ಣಿರೆ ಕಣ್ಣು ಬೇರಾದವರು ?
ಇನಿಸುಳ್ಳವರು ಮೊದಲಾಗಿ ನಿಮ್ಮ ಹಿಡಿಯಲಾರರು.
ಕಪಿಲ ಸಿದ್ಧಮಲ್ಲಿನಾಥಾ ನಿಮ್ಮ ಹಿಡಿದು ತಡೆಯ ತಾನೇ ತರವನಲ್ಲ.
ಕರುಣದಿಂ ಬಾರಾ ಎನ್ನ ದೇವರ ದೇವಾ !

—೨—

ಎನ್ನ ಒಳಗನೊತ್ತಿ ನೋಡುವಿರಿ, ಎನ್ನಲೇನುಂಟಯ್ಯ !
ನುಡಿ ಇಲ್ಲದ ಭವ ನೀನು ನುಡಿಗಲಿತೆನೆಂದರೆ

ನಿಮ್ಮ ನೊಡಂಬಡಿಸಲಾನು ಸಮರ್ಥನೇ ?
ಅನಂತ ವೇದಂಗಳೆಲ್ಲವೂ ನಿಮ್ಮ ಮುಂದೆ
ಉಸುರಿಕ್ಕಲಮ್ಮದೆ ಮೂಗರಾಗಿರ್ದವು.
ನಿಮಗಾನಿದಿರುತ್ತರವ ಕೊಟ್ಟು ಕೆಟ್ಟ ಕೇಡಿಂಗೆ ಏನೆಂಬೆನೆಲೆಯಯ್ಯಾ
ಕಪಿಲ ಸಿದ್ಧಮಲ್ಲಿಕಾರ್ಜುನಾ, ನಾನು ಭಯಭ್ರಷ್ಟನೆಂಬುದ ನೀವೆ ಬಲಿರಿ.

ಎನ್ನ ತನುಕರಗಿ ಮನಕೊರಗಿದ ದುಃಖವಿದಾರದಯ್ಯ !
ಅಯ್ಯಾ ಅಯ್ಯಾ ಎಂದು ಅಳುವ ಅಕ್ಕಿ ಇದಾರದಯ್ಯ ?
ಮರಹೆಂಬ ಕೂರಸಿಗೆ ಗುರಿ ಮಾಡಿದವರಾದಯ್ಯ !
ಹಾ—ಹಾ— ಎಂಬ ಧ್ವನಿಯ ಕೇಳಲಾರದೆ
ಕಂಡು ಕರುಣದಿಂದ ಶಿರವ ಹಿಡಿದೆತ್ತಿ
ಎನ್ನ ಕಣ್ಣ ನೀರ ತೊಡೆದನು ಕಪಿಲ ಸಿದ್ಧಮಲ್ಲಿನಾಥಯ್ಯನು.

—೪—

ಎನ್ನ ಭರಭಾರ ನಿಮ್ಮದಯ್ಯಾ, ಎನ್ನ ಹಾನಿ ವೃದ್ಧಿ ನಿಮ್ಮದಯ್ಯ
ಎನ್ನ ಕರಕರ ಕಾಡದಿರು ತಂದೆ ! ನಿನ್ನ ಕಾಟವೆನ್ನ ಪ್ರಾಣದೋಟ
ಕಪಿಲ ಸಿದ್ಧಮಲ್ಲಿನಾಥಾ ಕೊಲ್ಲು ಕಾಯಿ ನಿಮ್ಮ ಧರ್ಮದವ ನಾನು.

—೫—

ಉತ್ಪತ್ಯ, ಸ್ಥಿತಿ, ಲಯವಿಲ್ಲದ ಭವನು ನೀನು ಕಂಡಯ್ಯ,
ಎನಗೆ ಬೇರೆ ಸ್ವತಂತ್ರವಿಲ್ಲ ಕೇಳಾ
ನಿನ್ನ ಇಚ್ಛಾ ಮಾತ್ರದಲ್ಲಿ ನಾನಿಪ್ಪೆನು
ಹಿರಿಯ ನೀನೆ ದೇವ ನೀನೆ ಕಪಿಲ ಸಿದ್ಧಮಲ್ಲಿಕಾರ್ಜುನಾ,
ನಾನೇತರೊಳಗಪ್ಪೆನು ಹೇಳಾ ಪ್ರಭುವೆ ?

—೬—

ಅಪ್ಪುದ ನಲ್ಲದುದ ನೊಪ್ಪುವ ಮಂಡುವಿರಿ
ಅಯ್ಯಾ ನಿಮ್ಮೊಲವು ಚಲುವು ಕಂಡಯ್ಯ

ನೀ ನಿಂತು ನೋಡಿದರಂತಿರ್ಪುದಲ್ಲದೆ
ಅಪ್ಪುದಲ್ಲವೆಂಬವರಿಲ್ಲ ಕಾಣಾ ಕಪಿಲ ಸಿದ್ಧಮಲ್ಲಿಕಾರ್ಜುನಾ

—೬—

ಅಂಗವಳಿದು ನಿಂದವನೆಂದು ನಾನರಿಯೆ
ಘನಲಿಂಗದಲ್ಲಿ ಸಲೆಸಂದವನೆಂದು ನಾನರಿಯೆ
ಆರ ವೇಷದಲ್ಲಿ ಬಂದು ನಿಂದ ತಾವನರಿಯೆ
ಕ್ರೋಧವೆಂಬ ಸಂಸಾರದ ಸಾಗರದಲ್ಲಿ ಸಾಧನೆಯ
ಪ್ರಭು ದೇವರ ಸುಳುಹು ಅಘಟಿತವಾಯಿತ್ತು ಕಪಿಲ ಸಿದ್ಧಮಲ್ಲಿಕಾರ್ಜುನಾ!

—೭—

ಕಂಡ ಕನಸು ದಿಟವಾಗಿ ಕಂಡೆನೆಂಬೆ
ಕಂಡೆನೆಂಬುದು ಬೆನ್ನ ಬಿಡದು ನೋಡಾ !
ಕಂಡುದ ಕಾಣೆನೆಂಬುದ ಎರಡನೂ ಅರಿಯದೆ
ತವಕ ತಲ್ಲಣಕ್ಕೆ ಎಡೆಯುಂಡೆನು
ತವಕದ ಕೂಟ ನಿಮ್ಮಲ್ಲಿ ತದುಗತವಾದೆನು
ಕಪಿಲ ಸಿದ್ಧಮಲ್ಲಿನಾಥಯ್ಯ ನಿಮ್ಮ ಕರುಣವೆನಗೆ ಸಾಧ್ಯವಾಯಿತ್ತು.

ಎಲೆ ಅಯ್ಯ ನಿನ್ನ ಬೆಳಗಿನ ಪರಿಯ ಕೇಳು ಕಂಡಾ !
ನಾನಾರೆಂಬುದ ತಿಳಿದುನೋಡಿ ಕಂಡು ಬೆಳಗು ಕಾಬಪರಿ
ಎಂತು ಹೇಳಾ !
ಕಂಡುದ ಕಂಡು ಕಾಯದೊಳಗೆ ಸಂತವಿಡುವ ಪರಿ ಎಂತಯ್ಯ !
ಕಪಿಲ ಸಿದ್ಧಮಲ್ಲಿನಾಥಯ್ಯ ನೀನೆನ್ನ ಮನವ ತಿಳಿವಡೆ ಅಸಾಧ್ಯ
ವುಂಟೇ ದೇವರ ದೇವಾ!

—೯—

ಕೃಷಿಯ ಮಾಡಿ ಉಣ್ಣದೆ ಹಸಿವ ಹರಿವ ಪರಿ ಇನ್ನೆಂತು ?
ಕರ್ಮಯೋಗವ ಮಾಡದೆ ನಿರ್ಮಲ ಸುಚಿತ್ತವನರಿವ ಪರಿ ಇನ್ನೆಂತು?

ಜೀಯದ ಅಶನವ ತುಂಬಿ ತಾವಾವುದು ಕಪಿಲ ಸಿದ್ಧಮಲ್ಲಿಕಾರ್ಜುನ
ಲಿಂಗಕ್ಕೆ !

—೧೦—

ಬಣ್ಣವಿಲ್ಲದೆ ಚಿನ್ನನಾಮಕ್ಕರ್ಹನಾವ ಪರಿ ಇನ್ನೆಂತಯ್ಯ ?
ಹೂ ಒಣಗಿ ವಾಸನೆ ಮುಡಿದ ತಾವಿನಲ್ಲಿ ವಾಸನೆ ನಿಂದುದಿಲ್ಲವೆ ?
ಅಯ್ಯಾ ! ಕ್ರೀ ಶುದ್ಧವಾದಲ್ಲಿ ಕಪಿಲ ಸಿದ್ಧಮಲ್ಲಿಕಾರ್ಜುನ
ಲಿಂಗವು ಭಾವ ಶುದ್ಧವಾಗಿರ್ಪನು.

—೧೧—

ನುಡಿದಿಹೆನೆಂಬ ಉಲುಹಿನ ಗಲಭೆಯ ತೋಟ ಬಿಡದು
ಉತ್ತಮ ಮಧ್ಯಮ ಕನಿಷ್ಟವೆಂಬ ತಿರುಗಿ ಕಂಡಿಹೆನೆಂಬ ಕಾಲಿನ
ಎಡೆಯಂಟ ಬಿಡದು
ಎನಗೆ ಗರ್ವ ಮೊದಲಾದಲ್ಲಿ ನಿಮಗೆ ಗರ್ವವೆಗ್ಗಳವಾಯಿತ್ತು.
ಉಭಯದ ತೋಟಿಯ ನಾ ನಿನ್ನಾರಿಗೆ ಹೇಳುವೆ ಕಪಿಲ ಸಿದ್ಧ
ಮಲ್ಲಿಕಾರ್ಜುನಾ !

—೧೨—

ಭೂಮಿ ಒಂದೆಂದೊಡೆ ಬೆಳೆವ ವೃಕ್ಷ ಹಲವು ತೆರನುಂಟು.
ಉದಕ ಒಂದಾರೆದ ಸವಿಸಾರದ ಸಂಪದ ಬೇರುಂಟು.
ನಿನ್ನ ಒಳಗು ನಾನಾದಡೆ ತಾಮಸದ ರಾಗವಿರಾಗವಾಗದು
ಕಪಿಲ ಸಿದ್ಧಮಲ್ಲಿಕಾರ್ಜುನ ಲಿಂಗವೆಂಬ ಪುರುಷ್ತಿ ಕೂಟಸ್ಥವಿಲ್ಲ.

—೧೩—

ಉಪಮ ಅನುಪಮ ಎಂಬುದು ನಿಮ್ಮಾಧೀನ ಕಂಡಯ್ಯಾ
ಹೇಳಿಹೆ ಕೇಳಿಹೆ ನೆಂಬುದು ನೀವೆ ಕಂಡಯ್ಯ !
ಎನ್ನಂತರಂಗಕ್ಕೆ ಬಹಿರಂಗಕ್ಕೆ ನೀವೆ ಕರ್ತರಾದ ಕಾರಣ
ನಿಮ್ಮ ನಿಜವ ಹೇಳದಿರ್ದಡೆ ಎಂತುಳಿವೆನಯ್ಯ
ಸಿದ್ಧಮಲ್ಲಿಕಾರ್ಜುನಾ.

—೧೩—

ಕಾಯವೇ ಪೀಠಿಕೆ; ಪ್ರಾಣವೇ ಲಿಂಗವಾಗಿರಲು ಬೇರೆ ಮತ್ತೆ ಕುರು

ಕುರುಹು ವಿಡಿದು ಕೂಡುವ ನಿರವಯಲುಂಟೆ ? ಜಗದೊಳಗೆ ನಷ್ಟವ ಕೈಯಲ್ಲಿ ಹಿಡಿದು ದೃಷ್ಟವ ಕಂಡಿಹೆನೆಂದರೆ ಕಪಿಲ ಸಿದ್ಧಮಲ್ಲಿನಾಥಯ್ಯನು ಸಾಧ್ಯವಹೆ ಪರಿಯ ಹೇಳಾ ಪ್ರಭುವೇ ?

—೧೪—

ಅಯ್ಯಾ ನಿಮ್ಮ ಕರಸ್ಥಲದ ಘನವನು ಪಮಿಸಬಲ್ಲವರಿಲ್ಲವಯ್ಯ ! ನಿಮ್ಮ ಮಹಿಮೆಯ ನರಿವರೆ ನಾನೇತರೊಳಗೇನಯ್ಯಾ ! ಆ ಇಷ್ಟಲಿಂಗದೊಳಗೆ ಮುಟ್ಟಿದ, ಶರಣನೊಳಗೆ ಹುಟ್ಟಿದ ಕರಸ್ಥಲ ವಷ್ಟೆಂಬುದತಿಳಿಹಿ ಎನ್ನ ಸುಳುಹಿಕೊಳ್ಳಾ ಕಪಿಲಸಿದ್ಧ ಮಲ್ಲಿಕಾರ್ಜುನಾ!

—೧೫—

ಅಯ್ಯಾ ನಿಮ್ಮ ಸರಉಂಡ ಶಬುದವೆನ್ನ ಮನಕ್ಕೆ ವೇದ್ಯವಾಯಿತ್ತು.
ನಿಮ್ಮ ನಿಜಉಂಡ ನಿಲವು ಎನ್ನ ಮತಿಗೆ ವೇದ್ಯವಾಯಿತ್ತು.
ನಿಮ್ಮ ಕರುಣ ಪ್ರಸಾದವೆನ್ನ ಸರ್ವಾಂಗ ವೇದ್ಯವಾಯಿತ್ತು.
ನಿಮ್ಮ ಕಾಯ ವಿಡಿದಿಪ್ಪ ಕರಸ್ಥಲದ ಕಾರಣವ ಹೇಳಾ ಕಪಿಲಸಿದ್ಧ ಮಲ್ಲಿಕಾರ್ಜುನಾ,

—೧೬—

ಅಯ್ಯಾ ನಿಮ್ಮ ದೇವರೆಂದು ಭಾವಿಸಲರಿಯೆನು ಕೇಳು ಕಂಡಾ, ಎನ್ನಮನವ ನುಂಗಿದೆಯೆಂದು ಹಿಂದೆ ನಿಮಗಾನು ಬಿನ್ನಹವ ಮಾಡಿದ ಕಾರಣ, ಎನ್ನ ಒಳಹೊರಗೆಲ್ಲ ನೀನೆ ಕಂಡಯ್ಯ
ನಿಮ್ಮೊಳಗೆ ಅಡಗಿದ ನುಡಿಯನೊಳಕೊಂಡ ಅರಿವು ಅರಿದರಿದು ಮರೆದ ಪರಿ ಎಂತಯ್ಯ ಕಪಿಲ ಸಿದ್ಧಮಲ್ಲಿನಾಥಯ್ಯ

( ಸಂಪೂರ್ಣ )

# ನಮ್ಮ ಪ್ರಕಟಣೆಗಳು

## [ ಕಾಮಶಾಸ್ತ್ರದ ಪುಸ್ತಕಗಳು ]

| | | |
|---|---|---|
| ೧ | ಸಂಸಾರ ಸುಖ | ೦—೬—೦ |
| ೨ | ಮೊದಲ ರಾತ್ರಿ | ೦—೬—೦ |
| ೩ | ಅನೈಸರ್ಗಿಕ ರತಿಕ್ರೀಡೆ | ೦—೬—೦ |
| ೪ | ರತಿ ಕಲೆ | ೦—೬—೦ |
| ೫ | ಸಂಭೋಗಾಸನಗಳು | ೦—೬—೦ |
| ೬ | ದಾಂಪತ್ಯ ವಿಲಾಸ | ೦—೬—೦ |
| ೭ | ರತಿಶಾಸ್ತ್ರ | ೦—೬—೦ |
| ೮ | ದಾಂಪತ್ಯ ಸುಖ | ೦—೬—೦ |
| ೯ | ಲೈಂಗಿಕ ರೋಗಗಳು | ೦—೬—೦ |

## ಧಾರ್ಮಿಕ ಪುಸ್ತಕಗಳು

| | |
|---|---|
| ವೀರಭದ್ರದೇವನ ವಡಬುಗಳು | ೦—೬—೦ |
| ಶ್ರೀ ಸಿದ್ಧ ರಾಮೇಶ್ವರ ಚರಿತ್ರೆ | ೦—೬—೦ |
| ಶ್ರೀ ಬನಶಂಕರೀ ಚರಿತ್ರೆ | ೦—೬—೦ |
| ಸರ್ವಜ್ಞ ವಚನಗಳು | ೦—೬—೦ |

## [ ನಾಟಕಗಳು ]

| | | |
|---|---|---|
| ೧ | ವರದಕ್ಷಿಣೆ | ೦—೧೨—೦ |
| ೨ | ಸತ್ಯಪರೀಕ್ಷೆ | ೦—೧೨—೦ |

## —: ಕಾದಂಬರಿಗಳು :—

| | | |
|---|---|---|
| ೧ | ದುರ್ಭೋಗ | ೦—೯—೦ |
| ೨ | ಪಾತಾಳ ಗೃಹ | ಅಚ್ಚಿನಲ್ಲಿ |

ಪ್ರಕಾಶಕರು:-

**ಜೆ. ಟಿ. ಬಾಕಳೆ**

ಶ್ರೀ ಜಗದಂಬಾ ಪ್ರಕಾಶನ, ೧೪೪೭೩,

ಹುಬ್ಬಳ್ಳಿ.